ಓಇಮ್

ಗ್ವೇದ | ಸಾಮವೇದ

# ವೇದಪ್ರಕಾಶ

ರ್ವೇದ | ಅಥರ್ವವೇದ



ಸಂಪುಟ ೮ | ದುಂದುಭಿ ಸಂವತ್ಸರ ಆಷಾಢ ಶ್ರಾವಣ - ಜುಲಾಯಿ ಆಗಸ್ಟ್ ೧೯೮೨ | ಸಂಚಿಕೆ ೪–೫

ಸತ್ಯದರ್ಶಕರಿಗೆ–ತತ್ವನಿಷ್ಠರಿಗೆ–ವಿಚಾರವಾದಿಗಳಿಗೆ
ಮೆಚ್ಚಿಗೆಯ ಮಾಸಪತ್ರಿಕೆ

ಶುಭಕಾಮನೆಗಳೊಂದಿಗೆ

## ಚಾತುರ್ಮಾಸ್ಯದ ಅಧ್ಯಯನಕ್ಕಾಗಿ

# ಶ್ರಾವಣೀ ವಿಶೇಷಾಂಕ

ಮತ್ತು

# ಸ್ವಾತಂತ್ರ್ಯೋತ್ಸವ ಸಂಚಿಕೆ

ನಾಲ್ಕೂ ವೇದಗಳ ಕುರಿತು, ಅಖಿಲಕರ್ಣಾಟಕದಲ್ಲಿ ಪ್ರಕಟವಾಗುವ
ಏಕೈಕ ಮಾಸಪತ್ರಿಕೆ "ವೇದಪ್ರಕಾಶ"

**ಪ್ರಧಾನ ಸಂಪಾದಕರು**
ಶ್ರೀ ಪಂ॥ ಸುಧಾಕರ ಚತುರ್ವೇದೀ
ಜಯನಗರ, ಬೆಂಗಳೂರು

**ಉಪಸಂಪಾದಕರು**
ಶ್ರೀ ಪಂ॥ ಮಂಜುನಾಥ ಶಾಸ್ತ್ರಿ, ಎಂ. ಎ.

**ಸಹಾಯಕ ಸಂಪಾದಕರು**
ಶ್ರೀ ಕೆ. ವಿ. ಶೇಷಾಚಲಪತಿ, ಬಿ. ಎ.

**ಪ್ರಕಾಶಕರು**
ಶ್ರೀ ಪ॥ ಸಂಜೀವ ಕಾಮತ್,
ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ
ಕುಂಜಿಬೆಟ್ಟು, ಉಡುಪಿ-೫೭೬ ೧೦೨

**ಸಂಪಾದಕ ಮಂಡಲಿ**
ಡಾ॥ ಪ. ನಾರಾಯಣರಾವ್. M. A., Ph.D
ಶ್ರೀ ಕು. ಶಿ. ಹರಿದಾಸ ಭಟ್, ಎಂ. ಎ.
ಶ್ರೀ ವೇದವ್ರತ, B.Sc., M.A., B.Ed.
ಶ್ರೀ ಜ್ಯೇಷ್ಠವರ್ಮನ್, ಎಂ. ಎ. ಮುಂಬಯಿ
ಶ್ರೀ ಸುಕುಮಾರಶಾಸ್ತ್ರಿ, ಎಂ. ಎ., (ಸಂ -ಹಿಂ.)
ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳ, ಎಂ. ಎ.

**ಮುದ್ರಕರು:**
ಶ್ರೀ ಗಣೇಶ್ ಪ್ರಿಂಟರ್ಸ್, ಅಳಕೆ, ಮಂಗಳೂರು
ವಾರ್ಷಿಕ ಚಂದಾ: ಅಂಚೆ ಸೇರಿ ರೂ. ೧೫–೦೦
ಆಜೀವ ಸದಸ್ಯರಿಗೆ ರೂ. ೧೫೦–೦೦

# ದೈವೀ ವಾಣಿಯಿಂದ ಸತ್ಯವನ್ನು ತಿಳಿದು ಉತ್ತಮವಾಗಿ ವ್ಯವಹರಿಸಿರಿ!

ಅಪಕ್ರಾಮನ್ ಪೌರುಷೇಯಾದ್ವೃಣಾನೋ ದೈವ್ಯಂ ವಚಃ ।
ಪ್ರಣೀತೀರಭ್ಯಾವರ್ತಸ್ವ ವಿಶ್ವೇಭಿಃ ಸಖಿಭಿಃ ಸಹ ॥

[ಅಥರ್ವ: ೬–೧೫–೧]

ಹೇ ಮಾನವನೇ! ಪೌರುಷೇಯ ಎಂದರೆ ಮಾನವೀಯ ವಾಣಿಯಿಂದ ಅಂದರೆ ಜನಸಾಮಾನ್ಯರಿಂದ ಬೋಧಿಸಲ್ಪಡುವ ಮಾತುಗಳು ಹಾಗೂ ಸಾಹಿತ್ಯದಿಂದ ಅತ್ತ ಸರಿಯುತ್ತಾ ಪರಮಾತ್ಮನಿಂದ ಬೋಧಿಸಲ್ಪಟ್ಟ ದಿವ್ಯ ವಾಣಿಯನ್ನು ಸ್ವೀಕರಿಸುತ್ತಾ ನಿನ್ನ ಮಿತ್ರರೇ ಆಗಿರುವ ಸಮಸ್ತ ಜನರೊಂದಿಗೆ ಉತ್ತಮ ನೀತಿಯನ್ನು ಎಲ್ಲೆಡೆಯಿಂದಲೂ ವ್ಯವಹರಿಸು. ಅಂದರೆ ನಿತ್ಯ ಜೀವನದಲ್ಲಿ ಉತ್ತಮ ನೀತಿಯುಕ್ತವಾದ ವ್ಯವಹಾರಗಳನ್ನು ನಡೆಸು.

ಹೇ ಮಾನವ! ಸೀಮಿತ ಜ್ಞಾನದ ಸಾಧಾರಣ ವ್ಯಕ್ತಿಗಳ ವಚನಗಳಿಂದ ಅಂದರೆ ರೂಢಿವಾದಿಗಳು, ಮತಮತಾಂತರಗಳ ಸ್ವಾರ್ಥಲೋಲುಪರಿಂದ ಮೇಲೆದ್ದು ದಿವ್ಯವಾದ ಪರಮಾತ್ಮನ ವೇದವಾಣಿಯನ್ನು ಅಂಗೀಕರಿಸಿ ತಾನು ತನ್ನವರೆಂಬ ಸ್ವಾರ್ಥಭಾವನೆಗೆ ಅವಕಾಶ ಮೀಯದೆ ಸಮಾನ ಭಾವನೆಯಿಂದ ಸರ್ವರೊಡನೆ ಉತ್ತಮವಾಗಿ ವ್ಯವಹರಿಸಿದರೆ ಬಾಳು ಹಸನಾಗುವುದು. ಆದರೆ ಈ ವಾಣಿಯ ಸತ್ಯವನ್ನು ತಿಳಿಯಬೇಕಾದರೆ ಬ್ರಹ್ಮವರ್ಚಸ್ಸನ್ನು ಬೆಳೆಸಿಕೊಳ್ಳುವುದು ಅತ್ಯಂತ ಅವಶ್ಯಕವೆಂಬುದನ್ನು ತಿಳಿದುಕೊಳ್ಳಬೇಕು. ಆದಕ್ಕಾಗಿ ವೇದಾಧ್ಯಯನ ಮಾಡೋಣ.

ಈ ಪವಿತ್ರ ವಾಣಿಯನ್ನು ನಮ್ಮದಾಗಿಸಿಕೊಂಡು ಸರ್ವಮಾನವ ಜನಾಂಗವನ್ನು ನಮ್ಮವರನ್ನಾಗಿ ಮಾಡಿಕೊಳ್ಳೋಣ. ಯಾವ ಅಸ್ತ್ರದಿಂದಲೂ ಗೆಲ್ಲಲಾರದಾದಾಗ ಮಧುರವಾದ ವಾಣಿಯೊಂದೇ ವಿಜಯವನ್ನುಂಟುಮಾಡುವುದು.

ಈ ವಾಣಿಯ ಮಾಧುರ್ಯದಿಂದಲೇ ನಮ್ಮ-ನಿಮ್ಮ ವ್ಯವಹಾರ ಬೆಳೆಯುವಂತಾಗಲಿ.

M/s K. M. ANANDA PRABHU AND SONS
Kodialbail, Mangalore–575 003

| ವಿಷಯ ಸೂಚಿ | | ಪುಟ ಸಂಖ್ಯೆ |
|---|---|---|



# ವೇದಪ್ರಕಾಶ



ಸಂಪುಟ ೮ | ದುಂದುಭಿ ಸಂವತ್ಸರ ಆಷಾಢ ಶ್ರಾವಣ- ಜುಲಾಯಿ ಆಗಸ್ಟ್ ೧೯೮೨ | ಸಂಚಿಕೆ ೩೪ - ೫

## ವೈದಿಕ ಪ್ರಾರ್ಥನೆ

**ಓಂ ಪರ ಋಣಾ ಸಾವೀರಧ ಮತ್ಕೃತಾನಿ ಮಾಹಂ ರಾಜನ್ನನ್ಯಕೃತೇನ ಭೋಜಂ ।**
**ಅವ್ಯುಷ್ಟಾ ಇನ್ನು ಭೂಯಸೀರುಷಾಸ ಆನೋ ಜೀವಾನ್ವರುಣ ತಾಸು ಶಾಧಿ ॥**

[ಋಗ್ವೇದ– ೨. ೨೮. ೯.]

[ರಾಜನ್] ಸ್ವಯಂಪ್ರಕಾಶಮಾನ ಜಗದೀಶ್ವರನೇ! [ವರುಣ] ಬಂಧನವಿಮೋಚಕನಾದ, ದುಃಖನಿವಾರಕನಾದ, ವರಣೀಯನಾದ ಪ್ರಭುವೇ! [ಅಥ] ಇನ್ನು, [ಮತ್ಕೃತಾನಿ] ನಾನು ಮಾಡಿದ, [ಋಣಾ] ಸಾಲಗಳನ್ನು, [ಪರಾ ಸಾವೀಃ] ದೂರೀಕರಿಸು. [ಅಹಂ] ನಾನು, [ಅನ್ಯಕೃತೇನ] ಬೇರೆಯವರ ದುಡಿಮೆಯಿಂದ, [ಮಾ ಭೋಜಂ] ಉಣ್ಣದಿರುವೆ. [ನು] ನಿಜವಾಗಿ, [ಭೂಯಸೀಃ] ಬೇಕಾದಷ್ಟು, [ಉಷಾಸಃ] ಉಷಃಕಾಲಗಳು, ಉದಯರಾಗಗಳು, [ಅವ್ಯುಷ್ಟಾಃ ಇತ್] ಮೂಡಿಯೇ ಇಲ್ಲ. [ಜೀವಾನ್] ಜೀವರಾದ, [ನಃ] ನಮ್ಮನ್ನು [ತಾಸು] ಅವುಗಳಲ್ಲಿ, [ಆಶಾಧಿ] ಎಲ್ಲೆಡೆಯಿಂದಲೂ ಹಿಡಿತದಲ್ಲಿಡು.

ಓ ವರುಣದೇವ! ಎಲ್ಲರಿಗೂ ಸ್ವೀಕರಣೀಯನಾದ ಸ್ವಾಮಿ! ಬೇರೆಯವರಿಗೆ ಏನನ್ನೂ ಕೊಡದೆ, ಬೇರೆಯವರಿಂದ ಪಡೆಯುವುದೆಲ್ಲಾ ಋಣ; ಬೇರೆಯವರಿಗೆ ಕೊಟ್ಟು ಬೇರೆಯವರಿಂದ ಪಡೆದುಕೊಳ್ಳುವುದೇ ಧನ. ಬೇರೆಯವರಿಂದ ಕೇವಲ ಪಡೆದುಕೊಂಡು ಉಣ್ಣುತ್ತಾಹೋಗುವ ಜೀವನ ಪರಾನ್ನಪುಷ್ಟಜೀವನ; ಅದು ಋಣಾತ್ಮಕ ಜೀವನ. ಅದು ಆತ್ಮನ ಮೇಲೊಂದು ಸಾಲಗಾರತನದ ಸಂಕೋಲೆ. ಆದುದರಿಂದ, ಓ ಪಾಪವಿಮೋಚಕ! ನಾನು ಶಿಶುವಾಗಿದ್ದಾಗ, ಬಾಲಕನಾಗಿದ್ದಾಗ, ಕಿಶೋರನಾಗಿದ್ದಾಗ, ತಾಯಿ–ತಂದೆಗಳಿಂದ ಅವರಿಗೇನನ್ನೂ ಕೊಡದೆ, ಎಲ್ಲವನ್ನೂ ಪಡೆದುಕೊಂಡೆ; ಅನ್ನವೇನು, ವಸ್ತ್ರವೇನು, ನೆಲೆ ಏನು, ನೆರವು ಏನು–ಎಲ್ಲವನ್ನೂ ಕೊಡದೆ ಪಡೆದುಕೊಂಡೆ. ನನ್ನ ಅಸಮರ್ಥತೆಯೇ ಅದಕ್ಕೆ ಕಾರಣವಾಗಿರಬಹುದಾದರೂ, ಅದೆಲ್ಲಾ ಸಾಲವೇ- ಎಂಬುದರಲ್ಲಿ ಸಂದೇಹವೇ ಇಲ್ಲ. ಅದೇ ರೀತಿ, ನಾನು ಚಿಕ್ಕಂದಿನಲ್ಲಿ ಗುರು ಹಿರಿಯರಿಂದಲೂ ಬೇಕಾದಷ್ಟು ಪಡೆದಿದ್ದೇನೆ; ಬೇರೆಯವರಿಗೆ ಕೊಟ್ಟುದಕ್ಕಿಂತ ಹೆಚ್ಚಾಗಿ, ಬೇರೆಯವರಿಂದ ಪಡೆದುಕೊಂಡಿದ್ದೇನೆ. ಇದೆಲ್ಲಾ ತನ್ನ ತಲೆಯ ಮೇಲೆ ಭಾರವಾಗಿ ಕುಳಿತ ಋಣದ ಹೊರೆ. ಪ್ರತ್ಯುಪಕಾರಮಾಡಿ, ಈ ಸಾಲವನ್ನು ತೀರಿಸುವ ಸಾಮರ್ಥ್ಯವನ್ನು ನನಗೆ ನೀಡು.

ಮತ್ತು, ಓ ಜಗನ್ನಾಥ! ಇನ್ನಾದರೂ ಈ ಋಣಾತ್ಮಕ ಜೀವನಕ್ಕೆ ತಿಲಾಂಜಲಿಯಿತ್ತು, ಧನಾತ್ಮಕವಾದ ಜೀವನವನ್ನು ನಡೆಸಬೇಕೆಂದು ಸಂಕಲ್ಪಿಸಿದ್ದೇನೆ. ಅನ್ಯಕೃತದಿಂದ ಜೀವಿಸುವ, ಬೇರೆಯವರ ದುಡಿಮೆಯಿಂದ ಬಾಳುವ ವೃತ್ತಿ–ಋಣಾತ್ಮಕವೃತ್ತಿ- ಅಭಾವ

ಸೂಚಕ; ಧನಾತ್ಮಕವೃತ್ತಿಯೇ ತನ್ನ ದುಡಿಮೆಯಿಂದ ಗಳಿಸಿ, ಇತರರಿಗೂ ಇತ್ತು, ಇತರರಿಂದ ಪಡೆದು ಜೀವಿಸುವ ವೃತ್ತಿಯೇ ಭಾವಸೂಚಕ. ಅಜರಾಮರನಾದ, ಅನಾದಿ–ಅನಂತನಾದ, ಚೇತನನಾದ ಜೀವಾತ್ಮನಾಗಿದ್ದರೂ ಕೂಡ, ಋಣಾತ್ಮಕವೃತ್ತಿವಹಿಸಿ, 'ಅಭಾವ'ವೆನಿಸಲು 'ಶೂನ್ಯ'ನೆನಿಸಲು ನಾನು ಬಯಸೆನು. ಆದುದರಿಂದ, ಹೇ ತಂದೆ! ನಾನು ಬೇರೆಯವರ ದುಡಿಮೆಯಿಂದ ಬಾಳದಿರುವಂತೆ ಅನುಗ್ರಹಿಸು. ನನ್ನ ಸ್ವಂತ ಗೆಯ್ಮೆಯಿಂದ ಬದುಕುವ ಬಲವನ್ನು–ಸ್ವಾವಲಂಬನದ ಸುಲಲಿತ ಸಾಮರ್ಥ್ಯವನ್ನು ನನ್ನಲ್ಲಿ ತುಂಬು.

ದೇವದೇವ! ನನ್ನೊಬ್ಬನದೇನು? ನಮ್ಮೆಲ್ಲರ ಬಾಳೂ ಹೀಗೆಯೇ ಋಣಾತ್ಮಕವಾಗಿ ಸಾಗುತ್ತಾ ಬಂದಿದೆ. ಋಣಾತ್ಮಕ ಜೀವಿಗಳ-ಬೇರೆಯವರು ಬೆವರು ಸುರಿಸಿ ಬೆಳೆಸಿದ ಬೆಳೆಯನ್ನು ಕುಳಿತುಂಡು ಬೊಜ್ಜು ಬೆಳೆಸುವ ಪರಾನ್ನಪುಷ್ಟರ–ಸಂಖ್ಯೆ ಹೆಚ್ಚಿಹೋದರೆ, ಜಗತ್ತಿನಲ್ಲಿ ಸುಖಶಾಂತಿಗಳ ಸಾಮ್ರಾಜ್ಯವೆಂತು ಸ್ಥಾಪಿತವಾದೀತು? ಆದುದರಿಂದ, ಓ ಜಗತ್ಪಾಲಕ! ಕಳೆದುದಂತೂ ಕಳೆದೇ ಹೋಯಿತಲ್ಲ; ಆದರೆ ನಮ್ಮ ಬಾಳಿನ್ನೂ ಕೊನೆ ಮುಟ್ಟಿಲ್ಲ. ಇನ್ನೂ ಆದೆಷ್ಟೋ ಉಷಃಕಾಲಗಳನ್ನು–ಮುಂಬೆಳಗುಗಳನ್ನು-ನಾವು ನೋಡಬೇಕಾಗಿದೆ. ಅವುಗಳನ್ನು ನೇರವಾಗಿ ನಿಂತು ನೋಡಲಾಗದಂತೆ ನಮ್ಮ ಮಸ್ತಕಗಳು ಋಣಭಾರದಿಂದ ಬಾಗದಿರಲಿ. ನಾವು ಸಾಲಗಾರರಾಗದೆ, ಪರಾನ್ನಪುಷ್ಟರಾಗದೆ, ಬೇರೆಯವರ ದುಡಿಮೆಯನ್ನು ಅನುಭವಿಸುವವರಾಗದೆ, ಸ್ವಂತ ಕೃತದಿಂದ, ತಮ್ಮ ದುಡಿಮೆಯಿಂದ ಧೀರರಾಗಿ ಬಾಳುತ್ತಾ ಉದಯರಾಗದ ಹೊಂಬೆಳಕಿನಿಂದ ಸ್ಫೂರ್ತಿ ಪಡೆಯುತ್ತಾ ಜೀವಿಸೋಣ. ನಾವು ಬೇರೆಯವರಿಗೆ ಏನನ್ನೂ ಕೊಡದೆ, ಬೇರೆಯವರಿಂದ ಏನನ್ನೂ ಪಡೆಯದಿರೋಣ. ನಾವು ಬುದ್ಧಿಜೀವಿಗಳಾದರೆ-ಬುದ್ಧಿದಾನಮಾಡಿ, ಶಕ್ತಿಜೀವಿಗಳಾದರೆ ತ್ರಾಣ-ದಾನಮಾಡಿ, ಉದ್ಯಮಜೀವಿಗಳಾದರೆ ಸಂಪತ್ತುದಾನಮಾಡಿ, ಶ್ರಮಜೀವಿಗಳಾದರೆ ಶ್ರಮದಾನಮಾಡಿ, ಅನಂತರವೇ ಶರೀರ-ಆತ್ಮಗಳನ್ನು ಒಟ್ಟಿಗಿಡಲು ಬೇಕಾದ ಭೌತಿಕ ದ್ರವ್ಯವನ್ನು ಪಡೆದುಕೊಳ್ಳೋಣ. ಓ ಪಾಶವಿಮೋಚಕ! ಈ ರೀತಿ ನಮ್ಮ ಅವಶಿಷ್ಟ ಜೀವಿತದಲ್ಲಿ ನಮ್ಮನ್ನು ಸಂಯತರನ್ನಾಗಿ ಮಾಡಿ, ತಮ್ಮ ಋಣದ ಸಂಕೋಲೆಗಳನ್ನು ಕಡಿದುಹಾಕು. ನಾವು ಋಣರಹಿತರಾಗಿ, ಧನಸಹಿತರಾಗಿ ಅಭಾವದ ಮುದ್ದೆಗಳಾಗದೆ, ಭಾವದ ಜ್ಯೋತಿಗಳಾಗಿ ಆನಂದದಿಂದ ಜೀವಿಸೋಣ.

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

---

"ಮಾನವರೆ! ಹರ್ಷಜನಕವಾದ ಕಾರ್ಯಗಳನ್ನೇ ಸದಾಕಾಲ ಮಾಡಿರಿ. ಬುದ್ಧಿಗಳನ್ನು ಎಲ್ಲೆಡೆಯಿಂದಲೂ ವಿಸ್ತರಿಸಿರಿ. ಕಾಮ ಕ್ರೋಧಾದಿ ಶತ್ರುಗಳಿಂದ ರಕ್ಷಣೆಯನ್ನು ಕೊಡುವ ಸದಾಚಾರವೆಂಬ ನೌಕೆಯನ್ನು ನಿರ್ಮಿಸಿಕೊಳ್ಳಿರಿ. ಮಾನವತ್ವವನ್ನು ಎತ್ತಿ ಹಿಡಿಯುವ ಗುಣಗಳನ್ನು ಚೆನ್ನಾಗಿ ರೂಢಿಸಿಕೊಳ್ಳಿರಿ. ಜೀವನವನ್ನು ಸಿಂಗರಿಸಿಕೊಳ್ಳಲಿಕ್ಕಾಗಿ ಸತ್ಕರ್ಮಗಳನ್ನು ಮುಂದಕ್ಕೆ ನಡೆಯಿಸಿಕೊಂಡು ಹೋಗಿರಿ."

—ಋಗ್ವೇದ.

|| ಓಂ || ಸತ್ಯಮೇವ ಜಯತೇ ನಾನೃತಂ || ಓಂ ||

# ವೇದಪ್ರಕಾಶನದ-ಕಾಮನೆ

ಆತ್ಮೀಯ ಬಂಧು ಭಗಿನಿಯರೇ,

ಕಳೆದ ಸಂಚಿಕೆಯಲ್ಲಿ ಸೂಚಿಸಿದಂತೆ ಈ ಸಲವೂ ಆಷಾಢ-ಶ್ರಾವಣ (ಜುಲೈ-ಆಗಸ್ಟ್) ಸಂಯುಕ್ತ ಸಂಚಿಕೆಯನ್ನಾಗಿ ಕಳುಹಿಸುತ್ತಿದ್ದೇವೆ. ಪವಿತ್ರವಾದ ಚತುರ್ಮಾಸ್ಯವು ಶ್ರಾವಣದಲ್ಲಿ ಪ್ರಾರಂಭವಾಗಿ ಕಾರ್ತಿಕ ಮಾಸದಲ್ಲಿ ಕೊನೆಗೊಳ್ಳುವುದು. ಈ ನಾಲ್ಕು ತಿಂಗಳುಗಳಲ್ಲಿ ವೇದಾಧ್ಯಯನ ಮಾಡಲು ಆಲಸ್ಯ ಮಾಡಬೇಡಿ (ಸ್ವಾಧ್ಯಾಯನ್ಮಾ ಪ್ರಮದಃ) ಎಂದು ಹೇಳಿದ್ದಾರೆ. ಮಾನವರೆಲ್ಲರೂ ಸ್ವಾರ್ಥಲೋಲುಪರಾಗಿ ಅಧರ್ಮಪ್ರವೃತ್ತಿಯಿಂದ ಅರ್ಥಸಂಚಯ ಮಾಡುತ್ತಿರುವುದರಿಂದ ತ್ರಿವಿಧ ತಾಪಗಳಿಂದ ದುಃಖಪಡುತ್ತಿರುವುದನ್ನು ನಾವು ಸುತ್ತಲೂ ನೋಡುತ್ತಿದ್ದೇವೆ. ಭೌತಿಕ ಸುಖಕ್ಕಾಗಿ ಮಾರುಹೋದ ಮಾನವನು ಕೃತ್ರಿಮ ಮಾರ್ಗದಿಂದ ತನಗಿಷ್ಟಬಂದಂತೆ ಇತರರಿಗೆ ಕಷ್ಟವಾದರೂ ತಾನು ಸುಖದಿಂದ ಬಾಳಿದರೆ ಸರಿ-ಎಂಬ ಭಾವನೆಯಿಂದ ಲೌಕಿಕ ಸಾಧನಗಳ ಮೂಲಕ ತಕ್ಕಮಟ್ಟಿಗೆ ಸಫಲನೂ ಆಗಿರಬಹುದು. ಕೆಲವು ಕಾಲ ಸುಖವನ್ನೂ ಪಡೆಯುತ್ತಿರಬಹುದು. ಅಂತಹ ಅನೇಕ ಕುಟುಂಬಗಳನ್ನು ನಾವು ನೋಡಿದ್ದೇವೆ. ಅಷ್ಟೈಶ್ವರ್ಯ ಸಂಪನ್ನರಾದಾಗ್ಯೂ ಕೂಡ ಅನೇಕ ವಿಧವಾದ ರೋಗಗಳಿಗೆ ತುತ್ತಾಗಿ ಕಷ್ಟಕ್ಕೀಡಾಗುತ್ತಿರುವುದು ಸರ್ವವಿಧಿತ. ಭೌತಿಕ ಸಾಧನಗಳಿಂದ ಸುಖ ಸಿಗುವುದಾದರೂ ಅವನಿಗೆ ಆನಂದಲಭ್ಯವಾಗದು. ಪತ್ನಿಯ ಮೂಲಕ, ಸಂತಾನದ ಮೂಲಕ, ಕೌಟುಂಬಿಕವಾಗಿ, ಒಂದಲ್ಲ ಒಂದು ವಿಧವಾಗಿ ಕಷ್ಟಕ್ಕೀಡಾಗಿ, ದುಃಖದಿಂದ ವಿಮೋಚನೆಯಾಗಲು ಚಡಪಡಿಸುತ್ತಿದ್ದಾನೆ. ಅನೇಕ ವಿಧವಾದ ಶಾಂತಿಗಳು, ಬ್ರಾಹ್ಮಣ ಸಂತರ್ಪಣೆ, ಹಾಗೂ ತೀರ್ಥಕ್ಷೇತ್ರಗಳಲ್ಲಿ ಹೋಗಿ ಹರಕೆ ಅರ್ಪಿಸುವುದು-ಇತ್ಯಾದಿ ಬಹುಮುಖವಾಗಿ ಅರ್ಥವಿನಿಯೋಗವಾದರೂ ಕೆಲವರು ದೈಹಿಕವಾಗಿ, ಇನ್ನೂ ಕೆಲವರು ಸಂತಾನಹೀನರಾಗಿ ಮತ್ತೂ ಕೆಲವರು ರೋಗರುಜಿನಗಳಿಂದ ಶಾಶ್ವತ ಸುಖಪ್ರಾಪ್ತಿಗೆ ಅನರ್ಹರಾಗಿ ತೊಳಲಾಡುತ್ತಿರುವುದನ್ನು ನಾವು ಅಲ್ಲಲ್ಲಿ ಕಾಣಬಹುದು. ಬಹುಮೂಲ್ಯದ ಉಡುಪು-ತೊಡುಪುಗಳಾಗಲಿ, ವಾಹನ ಸೌಕರ್ಯವಾಗಲಿ, ಗಗನಚುಂಬಿ ಮಹಲುಗಳಾಗಲಿ ಆತನಿಗೆ ಆನಂದ ಕೊಡಲಾರವು.

ಇದನ್ನು ತಿಳಿದ ಋಷಿಗಳು ತಮ್ಮ ಸಂತಾನಕ್ಕೆ ಆನಂದ ಪ್ರಾಪ್ತಿಯಾಗುವಂತೆ ಸ್ವಾಧ್ಯಾಯದ ಮಹತ್ವಪೂರ್ಣ ನಿಯಮವನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಯಾವಾತನು ಈ ವೇದಜ್ಞಾನವನ್ನು ಪಡೆಯುತ್ತಾ ಅದಕ್ಕನುಸಾರವಾದ ಕರ್ಮಗಳನ್ನು ಮಾಡುತ್ತಾ, ಸರ್ವರನ್ನೂ ಆಶೀರ್ವಿಸುತ್ತಾ, ಕೆಳಗಿದ್ದವರನ್ನು ಮೇಲಕ್ಕೆತ್ತಿ ಹಿಂದೆಬಿದ್ದವರನ್ನು ಮುಂದೆತಂದು **'ಸರ್ವೇ ಜನಾಃ ಸುಖಿನೋ ಭವಂತು'** ಎಂಬಂತೆ ಸರ್ವರೂ ಸುಖಪಡೆಯಲಿಕ್ಕಾಗಿ, ಅಹೋರಾತ್ರಿ ಚಿಂತಿಸುತ್ತಾ ಸತತ ಪ್ರಯತ್ನ ಮಾಡುತ್ತಾನೋ ಅಂಥ ಮಾನವನು ಪರಮಾತ್ಮನಿಗೆ ಬಹಳ ಹತ್ತಿರದವನಾಗಿ ಎಲ್ಲಾ ವಿಧವಾದ ಸುಖ ಮತ್ತು ಆನಂದಗಳನ್ನು ಪಡೆಯುತ್ತಾ ಇತರರಿಗೂ ಮಾರ್ಗದರ್ಶನ ಮಾಡುತ್ತಾ "ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ" ಎಂಬಂತೆ

ಈಶ್ವರನ ಅಮೃತ ಪುತ್ರನಾಗುತ್ತಾನೆ. ದುಃಖದಿಂದ ವಿಮೋಚನೆಗೊಳ್ಳಾಗದೆ ಅಮೃತಪುತ್ರ ರಾಗಲು ಸಾಧ್ಯವಿಲ್ಲ. ಕೃತ್ರಿಮ ಸಾಧನಗಳಿಂದ ಬಾಹ್ಯರೂಪವನ್ನು ಬದಲಿಸಿಕೊಳ್ಳಬಹುದು. ಉದಾಹರಣೆಗೆ, ಬಿಳಿಕೂದಲನ್ನು ಕಪ್ಪು ಮಾಡಿಕೊಳ್ಳುವುದು, ದೃಷ್ಟಿದೋಷವನ್ನು ನಿವಾರಿಸಲು ಕನ್ನಡಕವನ್ನು ಧರಿಸುವುದು. ಕಿವುಡುತನವನ್ನು ನಿವಾರಿಸಲು ಇಯರ್‌ಫೋನ್ ಹಾಕಿಕೊಳ್ಳುವುದು, ಹಳತಾದ ಹಲ್ಲುಗಳನ್ನು ಕಳಚಿ, ಹೊಸ ಸೆಟ್‌ನ್ನು ಉಪಯೋಗಿಸುವುದು, ಮುಖಕ್ಕೆ ಪೌಡರ್, ಮೈಗೆ ಉತ್ತಮ ಪೋಷಾಕು-ಇತ್ಯಾದಿ ಸಾಧನಗಳಿಂದ ಸ್ವಲ್ಪಕಾಲ ಮೆರೆದರೂ, ಸಾವಿನಿಂದ ಮುಕ್ತನಾಗಲು ಸಾಧ್ಯವಿಲ್ಲ. ದೈಹಿಕ ಶಕ್ತಿಯನ್ನು ವರ್ಧಿಸಿಕೊಂಡು ನಿರೋಗಿಯಾದ ಮನುಷ್ಯನು ಸ್ವಲ್ಪ ಹೆಚ್ಚುಕಾಲ ಬದುಕಬಲ್ಲ ಆದರೆ ಸಾವು ಕಟ್ಟಿಟ್ಟದ್ದೇ. ಮಾನವನು ಧರಿಸಿಕೊಳ್ಳುವ ಲೌಕಿಕ ಸಾಧನಗಳೆಲ್ಲಾ ಕ್ಷಣಿಕ. ಇದಕ್ಕೆ ಶಾಶ್ವತವಾದ ಉಪಾಯವೊಂದೇ ಅದೇನೆಂದರೆ, **'ಋತೇ ಜ್ಞಾನಾನ್ನ ಮುಕ್ತಿಃ'** ಮಾನವನು ಆತ್ಮನ, ಪ್ರಕೃತಿಯ ಮತ್ತು ಪರಮಾತ್ಮನ ಸ್ವರೂಪದ ಬಗ್ಗೆ ಜ್ಞಾನವನ್ನು ಪಡೆಯದೆ ಮೋಕ್ಷವನ್ನು ಹೊಂದಲಾರ. ಆದಕ್ಕಾಗಿಯೇ ಋಷಿಮುನಿಗಳು ಒತ್ತಿ ಒತ್ತಿ ಹೇಳಿದ್ದಾರೆ—**"ಸ್ವಾಧ್ಯಾಯಾನ್ಮಾ ಪ್ರಮದಃ"** 'ಸ್ವಾಧ್ಯಾಯ ಮಾಡುವುದರಲ್ಲೆಂದಿಗೂ ಪ್ರಮಾದವನ್ನು ಮಾಡಬೇಡ'-ಎಂಬುದಾಗಿ,

ವಾಡಿಕೆಯಲ್ಲಿರುವ ಒಂದು ವಿಷಯವನ್ನು ನಾವು ಗಮನಿಸುವುದು ಅಗತ್ಯ- ಇದಕ್ಕೆ ಶಾಸ್ತ್ರಪ್ರಮಾಣವಿಲ್ಲ, ಆಷಾಢ ಶುದ್ಧ ಏಕಾದಶಿಯನ್ನು 'ಶಯನಿ ಏಕಾದಶಿ'ಯೆಂದೂ, ಮುಂದೆ ಕಾರ್ತಿಕ ಶುದ್ಧ ದ್ವಾದಶಿಯನ್ನು ಉತ್ಥಾನ ದ್ವಾದಶಿಯೆಂದೂ ಹೇಳುತ್ತಿದ್ದಾರೆ- ಈ ನಾಲ್ಕು ತಿಂಗಳುಗಳ ಪೂರ್ಣ ಅವಧಿಯಲ್ಲಿ ದೇವರು ಶಯನಕ್ಕೆ ತೆರಳಿ ಯೋಗನಿದ್ರೆಯಲ್ಲಿರುತ್ತಾನೆಂದೂ ಅನೇಕ ವಿದ್ವಾಂಸರೆನಿಸಿಕೊಂಡವರು ಸಹ ಹೇಳುತ್ತಿರುತ್ತಾರೆ- ಈ ನಾಲ್ಕು ತಿಂಗಳುಗಳ ಕಾಲದಲ್ಲೇ ವಿಶೇಷವಾಗಿ ಉಪಾಕರ್ಮ, ಶ್ರೀಕೃಷ್ಣ ಜಯಂತಿ, ಗೌರೀತೃತೀಯ, ಗಣೇಶ ಚತುರ್ಥಿ, ಅನಂತಚತುರ್ದಶಿ, ಮಹಾಲಯ ಅಮಾವಾಸ್ಯೆ, ಮಹಾನವಮಿ, ವಿಜಯದಶಮಿ, ದೀಪಾವಳಿ, ಉತ್ಥಾನದ್ವಾದಶಿ ಇತ್ಯಾದಿ ಹಬ್ಬಗಳನ್ನು ಆಚರಿಸುತ್ತಾ, ಅನೇಕ ವಿಧವಾದ ಭಕ್ಷ್ಯಭೋಜ್ಯಗಳನ್ನು ಮಾಡಿ ತಿಂದು ತೇಗಿ ನಲಿಯುತ್ತಾರಲ್ಲದೆ ಸ್ವಾಧ್ಯಾಯದ ವಿಷಯ ಎಲ್ಲಿಯೂ ನೋಡಸಿಗದು. ಬಹುಶಃ ದೇವರಂತೂ ಯೋಗ ನಿದ್ರೆಯಲ್ಲಿದ್ದಾನೆ- ನಾವು ಆದಷ್ಟು ತಿಂದು ತೇಗುವ—ಎಂಬ ಅಭಿಪ್ರಾಯವೇ ಇದ್ದಿರಬಹುದು. ಇವುಗಳಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿ, ಬಹಳ ವಿಜೃಂಭಣೆಯಿಂದ ನಡೆಯುವ ಗಣೇಶೋತ್ಸವ, ಶಾರದಾ ಪೂಜೆ (ದಸರಾ) ಇವುಗಳಲ್ಲಿ ಹಣದ ಪೋಲಾಗುವುದಕ್ಕೆ ಲೆಕ್ಕಮಿತಿಯಿಲ್ಲ- ಈ ರೀತಿ ಪೋಲಾಗುವ ಹಣವನ್ನು ಉಳಿಸಿಕೊಂಡು ದೀನದಲಿತರ ಕಲ್ಯಾಣಕ್ಕಾಗಿ, ವಿದ್ಯಾಭಿವೃದ್ಧಿಗಾಗಿ, ಅಬಲೆಯರ ರಕ್ಷಣೆಗಾಗಿ ವಿನಿಯೋಗಿಸುತ್ತಿದ್ದರೆ ಸಮಾಜಕ್ಕೆ ಎಷ್ಟೋ ಉಪಕಾರವಾಗುತ್ತಿತ್ತು. ದೀಪಾವಳಿ ಮತ್ತು ದಸರಾ ಕಾಲದಲ್ಲಿ ಕೋಟ್ಯಾಂತರ ರೂಪಾಯಿಗಳ ಸಿಡಿಮದ್ದು, ಅನೇಕ ಜನರ ಸಾವು, ಕಟ್ಟಡಗಳ ನಾಶ ವರ್ಷಂಪ್ರತಿ ನಡೆಯುವ— ಈ ದುರ್ವ್ಯವಹಾರ ಯಾರೂ ತಿಳಿಯದವರೇನಲ್ಲ. ಇದನ್ನು ಆದಷ್ಟು ಸಂಕುಚಿತಗೊಳಿಸಿ ಅದಕ್ಕೆ ವಿನಿಯೋಗಿಸುವ ಹಣವನ್ನು ಸತ್ಕಾರ್ಯಗಳಿಗೆ ವಿನಿಯೋಗಿಸಿದರೆ ಸಮಾಜಕಲ್ಯಾಣವಾಗುವುದು ನಿಶ್ಚಿತ. ಆದರೆ ಮಾಡುವುದೇನು? 'ಬುದ್ಧಿಜೀವಿ' ಎನಿಸಿಕೊಂಡ ಮಾನವನೇ ಬುದ್ಧಿಹೀನನಾಗಿ ತಿಳುವಳಿಕೆಯ ಅಭಾವ

ದಿಂದ ಕೋಟಿಗಟ್ಟಲೆ ಹಣದ ದುರ್ವಿನಿಯೋಗಕ್ಕೆ ಕಾರಣವಾಗುತ್ತಾನೆ. ದೇಶದ ಪರಿಸ್ಥಿತಿಯು ಚೆನ್ನಾಗಿಲ್ಲದಿರುವಾಗ ಪ್ರತಿಯೊಂದು ಪೈಸೆಯನ್ನೂ ಸಹ ಸದ್ವಿನಿಯೋಗವಾಗುವಂತೆ ಪ್ರಯತ್ನಿಸುವುದು ರಾಷ್ಟ್ರದ ಪ್ರಜೆಯ ಕರ್ತವ್ಯ. ಯಾವ ರಾಷ್ಟ್ರಪ್ರೇಮಿಯು ತನ್ನ ರಾಷ್ಟ್ರವು ಆರ್ಥಿಕವಾಗಿಯೂ, ಧಾರ್ಮಿಕವಾಗಿಯೂ ಮೇಲೆ ಬರಬೇಕೆಂದು ಅಪೇಕ್ಷಿಸುತ್ತಾನೋ ಅವರೆಲ್ಲರೂ ಈ ಕಡೆಗೆ ಗಮನವೀಯಬೇಕು. ಆಗ ಮಾತ್ರ ನರಜನ್ಮ ಸಾರ್ಥಕವಾದೀತು!

ಈ ಸಂಚಿಕೆಯಲ್ಲಿ ಉಪಾಕರ್ಮದ ಬಗ್ಗೆಯೂ, ಶ್ರೀಕೃಷ್ಣಾಷ್ಟಮಿ, ಗಣೇಶ ಚತುರ್ಥಿ, ಶಾರದಾಪೂಜೆ—ಇತ್ಯಾದಿಗಳ ಬಗ್ಗೆ ಸರಿಯಾದ ತಿಳುವಳಿಕೆಯನ್ನು ನೀಡಲಾಗುವುದು. ಜೊತೆಯಲ್ಲಿ ಸ್ವಾಧ್ಯಾಯ ಮಹಿಮೆಯನ್ನೂ ಅಗತ್ಯವಾಗಿ ಓದಿರಿ. ಕಲಿಯುಗದಲ್ಲಿ ನಾಮ ಸಂಕೀರ್ತನೆ ಮಾಡಿದರೆ ಸಾಕು. ಬೇರೇನೂ ಮಾಡಬೇಕಿಲ್ಲವೆಂಬ ಮೌಢ್ಯ ಜನತೆಯ ಮನೋಮಂದಿರದಲ್ಲಿ ಅಂಟಿಕೊಂಡಿದೆ. ಇದು ನೀಗಬೇಕಾದರೆ ವೇದಾಧ್ಯಯನ ಅತೀ ಅಗತ್ಯ. ಈ ಬಗ್ಗೆ ಪಾಶ್ಚಾತ್ಯರು ಬಹಳ ಉತ್ಸುಕರಾಗಿದ್ದಾರೆ, ಎಂದರೆ ಆಶ್ಚರ್ಯವಾಗಬಹುದಲ್ಲವೇ? ಆದರೆ ಸತ್ಯವನ್ನು ಮರೆಮಾಚಲಾಗುವುದೇ? ಭಾರತೀಯರಾದ ನಾವು ಈಗ ಆಳವಾಗಿ ಚಿಂತಿಸಬೇಕು. ಪ್ರತಿ ಮನೆಯಲ್ಲಿಯೂ ವೇದಾಧ್ಯಯನವಾಗುವಂತೆ ಪ್ರಯತ್ನಿಸಬೇಕು. ಪರಮಾತ್ಮನು ನಮ್ಮ ಬುದ್ಧಿಯಲ್ಲಿ ಪ್ರೇರಣೆ ನೀಡಲಿ. ಅದಕ್ಕಾಗಿ ಒಂದಾಗಿ ಪ್ರಾರ್ಥಿಸೋಣ.

ಓಂ ಶಂ

## ಅಗ್ನಿಹೋತ್ರವ ಮಾಡು; ಬೇಕಾದುದೆಲ್ಲವ ಪಡೆ

● ಪಂ॥ ಪ್ರಿಯವ್ರತ ವೇದವಾಚಸ್ಪತಿ

ವೈದಿಕ ಧರ್ಮೀಯರಿಗೆ ಅಗ್ನಿಹೋತ್ರ ಒಂದು ಪ್ರಮುಖವಾದ ಧಾರ್ಮಿಕ ಕ್ರಿಯೆ. ಪ್ರಾತಃಕಾಲ—ಸಾಯಂಕಾಲಗಳಲ್ಲಿ ಅವರು ಅಗ್ನಿಹೋತ್ರವನ್ನು ತಪ್ಪದೆ ಆಚರಿಸಬೇಕೆಂಬ ನಿಯಮವಿದೆ. ಇಂದಿಗೂ ಅನೇಕರು ಆಚರಿಸುತ್ತಿದ್ದಾರೆ, ನಿಜ. ಆದರೆ ತರ್ಕಪ್ರಧಾನವೂ, ಶ್ರದ್ಧಾವಿಹೀನವೂ ಆದ ಈ ಯುಗದಲ್ಲಿ ತರ್ಕವು ಋಷಿಯಾಗದೆ, ರಾಕ್ಷಸನಾಗಿದೆ, ಶ್ರದ್ಧೆಯು ಅಂಧಶ್ರದ್ಧೆಯಾಗಿದೆ. ಅಂಧಶ್ರದ್ಧೆಯನ್ನು ತೊಲಗಿಸಬೇಕೆಂದರೆ ಶ್ರದ್ಧೆಯನ್ನು ಬಿಡಬೇಕೆಂದೂ, ತರ್ಕಬದ್ಧನಾಗಿರಬೇಕೆಂದರೆ ಕೇವಲ ಅಷ್ಟರಲ್ಲಿಯೇ ಸೀಮಿತಗೊಳಿಸಬೇಕೆಂದು ಅರ್ಥಮಾಡಿದಂತಿದೆ ಇಂದು ಅನೇಕರ ರೀತಿ—ನೀತಿಗಳು. ತರ್ಕದಿಂದ, ವಿಚಾರಶಕ್ತಿಯಿಂದ, ಜ್ಞಾನಬಲದಿಂದ ನಿರ್ಧರಿಸಿದ ಸತ್ಯವನ್ನು ಅನುಷ್ಠಾನದಲ್ಲಿ ತರದಿದ್ದರೆ ಅದು ವ್ಯರ್ಥವಾಗುತ್ತದೆ. ಸತ್ಯವನ್ನು ಅನುಷ್ಠಾನಮಾಡಲು ಬೇಕಾದ ಅತ್ಯಾವಶ್ಯಕ ಪರಿಕರವೇ ಶ್ರದ್ಧೆ. ಈ ತಥ್ಯವನ್ನರಿತಾಗ ನಮ್ಮಲ್ಲಿಂದು ಎಲ್ಲಿ ತಪ್ಪುತ್ತಿದ್ದಾರೆಂದು ಸುಲಭವಾಗಿ ಅರಿಯಬಹುದು.

ಈ ಮಾತು ಅಗ್ನಿಹೋತ್ರಕ್ಕೂ ಅನ್ವಯಿಸುತ್ತದೆ. ಅಗ್ನಿಹೋತ್ರವನ್ನು ಪ್ರಾರಂಭಿಸುವ ಮುನ್ನ ಅದರ ದೈಹಿಕ, ಮಾನಸಿಕ, ಆತ್ಮಿಕ, ಪಾರಿವಾರಿಕ, ಇತ್ಯಾದಿ ಪ್ರಯೋಜನವೇ

ನೆಂಬುದನ್ನು ಮೊದಲು ಅರಿಯಬೇಕು. ಅರಿತ ನಂತರ ಆ ಬಗ್ಗೆ ಹೃದಯದಲ್ಲಿ ಶ್ರದ್ಧೆಯ ಜ್ಯೋತಿಯನ್ನು ನಿರಂತರ ಪ್ರಜ್ವಲಿಸುವಂತೆ ಏರ್ಪಡಿಸಬೇಕು. ಬುದ್ಧಿಪೂರ್ವಕವಾಗಿ ಗ್ರಹಿಸಿದ ಸತ್ಯವನ್ನು ಶ್ರದ್ಧೆಯಿಂದ ಮಾಡಿದಾಗ ಮಾತ್ರವೇ ಅದರ ಪೂರ್ಣ ಪ್ರಯೋಜನ ಪಡೆಯುವವ ರಾಗುತ್ತೇವೆ. ಇಲ್ಲವಾದರೆ ಅಗ್ನಿಹೋತ್ರ ಅಥವಾ ಇನ್ನಿತರ ಶುಭಕಾರ್ಯಗಳು ಯಾಂತ್ರಿ ಕವೂ ನೀರಸವೂ ಆದ ಕಾರ್ಯವಾಗಿ ಕ್ರಮೇಣ ಅದರಿಂದ ಯಾವುದೇ ಸಂತಸ, ಸುಖಗಳನ್ನೂ ಪಡೆಯದ ಸ್ಥಿತಿಗೆ ತಲುಪುವಂತಾಗಬಹುದು.

ಆದುದರಿಂದ ಪ್ರಿಯ ಧರ್ಮ ಭಾಂಧವರೇ! ಮೊದಲಾಗಿ ಅಗ್ನಿಹೋತ್ರವು ಶಾರೀರಿಕ ವಾಗಿ, ಮಾನಸಿಕವಾಗಿ ಅದೆಷ್ಟು ಪ್ರಯೋಜನಕಾರಿಯೆಂಬುದನ್ನು ವೈಜ್ಞಾನಿಕವಾಗಿ ಅರಿಯಿರಿ. ಬುದ್ಧಿಜೀವಿಯಾದಲ್ಲಿ ಮಾನವನು ಮಾಡುವ ಎಲ್ಲಾ ಕಾರ್ಯಗಳೂ ಅವನ ಸರ್ವಾಂಗೀಣ ಉನ್ನ ತಿಗೆ ಪ್ರೇರಕವಾಗುವಂತಿರಬೇಕು. ಲಾಭದಾಯಕವಾದ ಕಾರ್ಯವನ್ನು ಮಾತ್ರ ಮಾಡುವ ವರನ್ನೇ ಬುದ್ಧಿಶಾಲಿಗಳೆಂದು ಲೋಕವು ಗುರುತಿಸುತ್ತದೆ. 'ಲಾಭದಾಯಕ' ಎಂಬ ಶಬ್ದವನ್ನು ಇಲ್ಲಿ ಕೇವಲ ಹಣಕಾಸಿನ ಅಥವಾ ಭೌತಿಕ ಸಮೃದ್ಧಿಯ ದೃಷ್ಟಿಕೋನದಿಂದಷ್ಟೇ ನೋಡ ಬಾರದು. ಭೌತಿಕ, ಮಾನಸಿಕ, ಸಾಮಾಜಿಕ, ಆತ್ಮಿಕ—ಹೀಗೆ ಎಲ್ಲಾ ರಂಗಗಳಲ್ಲೂ ಪ್ರಗತಿ ಯಾದರೆ ಮಾತ್ರ ಮಾನವನ ಬಾಳು ಸಾರ್ಥಕತೆಯನ್ನೂ, ನೆಮ್ಮದಿಯನ್ನೂ, ಸಂತಸವನ್ನೂ ಉಣಬಲ್ಲದು. ಅಗ್ನಿಹೋತ್ರವು ಈ ಎಲ್ಲಾ ರೀತಿಯ ಸಮಗ್ರ ಮಾನವೋನ್ನತಿಯ ಸಾಧನ ವಾಗಿದೆ. ಅಗ್ನಿಹೋತ್ರದಿಂದ ಶಾರೀರಿಕ ರೋಗಗಳು ನಿಯಂತ್ರಣಕ್ಕೊಳಗಾಗುತ್ತವೆ. ಮನೆ ಹಾಗೂ ಪರಿಸರ ರೋಗಾಣುಗಳಿಂದ ಮುಕ್ತವಾಗುತ್ತದೆ. ಜಲ—ವಾಯುಗಳ ನಿರಂತರ ಶುದ್ಧೀ ಕರಣ ಇದರಿಂದಾಗುತ್ತದೆ. ವೈಜ್ಞಾನಿಕ ಪರೀಕ್ಷಣಗಳಿಂದ ಈ ಮಾತು ಸಿದ್ಧವಾಗಿದೆ. ಇದ ಕ್ಕಿಂತ ಹೆಚ್ಚಿಗೆ ಮಾನಸಿಕ, ಆತ್ಮಿಕೋನ್ನತಿಯು ಸಾಧ್ಯವಾಗುತ್ತದೆ. ನೋಡಿರಿ:

ಯಃ ಸಮಿಧಾ ಯ ಆಹುತೀ ಯೋ ವೇದೇನ ದದಾಶ
ಮರ್ತ್ಯೋ ಅಗ್ನಯೇ । ಯೋ ನಮಸಾ ಸ್ವಧ್ವರಃ ॥
ತಸ್ಯೇದರ್ವಂತೋ ರಂಹಯಂತ ಆಶವಸ್ತಸ್ಯ ದ್ಯುಮ್ನಿತಮಂ
ಯಶಃ । ನ ತಮಂಹೋ ದೇವಕೃತಂ ಕುತಶ್ಚನ ನ ಮರ್ತ್ಯಕೃತಂ ನಶತ್ ॥

[ಋಗ್ವೇದ:- ೮-೧೯-೫, ೬]

ಅರ್ಥ:— [ಸ್ವಧ್ವರಃ] ಉತ್ತಮ ರೀತಿಯಿಂದ ಯಜ್ಞ ಮಾಡುವ [ಮರ್ತ್ಯಃ] ಮನು ಷ್ಯನು [ಯಃ] ಯಾವ [ಸಮಿಧಾ] ಸಮಿತ್ತಿನಿಂದ [ಯಃ] ಯಾವ, [ಆಹುತೀ] ಆಹುತಿಯಿಂದ [ಯಃ] ಯಾವ [ವೇದೇನ] ವೇದದಿಂದ [ಯಃ] ಯಾವ [ನಮಸಾ] ನಮಸ್ಕಾರದಿಂದ [ಅಗ್ನಯೇ] ಪ್ರಕಾಶಮಯ ಜ್ಞಾನ ಸ್ವರೂಪ ಪರಮಾತ್ಮನಿಗಾಗಿ [ದದಾಶ] ಕೊಟ್ಟು ಬಿಡು ತ್ತಾನೋ [ತಸ್ಯ] ಅವನ [ಇತ್ ಆಶವಃ] ಈ ತೀವ್ರಗಾಮೀ [ಅರ್ವಂತಃ] ಕುದುರೆಗಳು [ರಂಹಯಂತೇ] ಓಡುತ್ತವೆ. [ತಸ್ಯ] ಅವನಿಗೆ [ದ್ಯುಮ್ನಿತಮಂ] ಬಹಳ ಧನಯುಕ್ತ [ಯಶಃ] ಯಶವುಂಟಾಗುತ್ತದೆ. [ತಸ್ಯ] ಅವನ [ಕುತಶ್ಚನ] ಎಲ್ಲಿಯಾದರೂ [ದೇವಕೃತಂ] ದೇವತೆಗಳಿಂದ ಮಾಡಲ್ಪಟ್ಟ [ನ] ಇಲ್ಲವೇ [ಮರ್ತ್ಯಕೃತಂ] ಮನುಷ್ಯನಿಂದ ಮಾಡಲ್ಪಟ್ಟ [ಅಂಹಃ] ಅನಿಷ್ಟವನ್ನು [ನಶತ್] ನಾಶ ಮಾಡುತ್ತದೆ.

ಮೇಲಿನ ಎರಡೂ ಮಂತ್ರಗಳಲ್ಲೂ ಅಗ್ನಿಹೋತ್ರದ ಮಹಿಮೆ ತಿಳಿಯ ಪಡಿಸಲಾಗಿದೆ. ಅಗ್ನಿಹೋತ್ರವನ್ನು ಯಾವ ರೀತಿಯಲ್ಲಿ ಮಾಡಬೇಕೆಂಬುದನ್ನು ಪ್ರಥಮ ಮಂತ್ರದಲ್ಲಿ ಸ್ಪಷ್ಟಗೊಳಿಸಲಾಗಿದೆ. ಅಗ್ನಿಯಲ್ಲಿ ಸಮಿತ್ತುಗಳನ್ನು ಹಾಕಿ ವೇದಮಂತ್ರೋಚ್ಚಾರಣ ಪೂರ್ವಕ ಘೃತಾದಿ ಹವ್ಯದ್ರವ್ಯಗಳಲ್ಲಿ ಆಹುತಿಯನ್ನು ನೀಡಬೇಕು. ಮತ್ತು ಪರಮಾತ್ಮನಿಗೆ ನಮಸ್ಕಾರಪೂರ್ವಕ ಆತ್ಮ ಸಮರ್ಪಣೆ ಮಾಡಿಕೊಳ್ಳಬೇಕು. ಈ ಭಾವನೆ ಹೃದಯದಲ್ಲಿ ದೃಢಗೊಳ್ಳಬೇಕು. ಇದು ಅಗ್ನಿಹೋತ್ರದ ವಿಧಾನ. ಈ ರೀತಿ ಆತ್ಮಸಮರ್ಪಣ ಭಾವದಿಂದ ಮಾಡುವ ಅಗ್ನಿಹೋತ್ರದಿಂದ ಸಿಗುವ ಪ್ರಯೋಜನವೇನು? ಈ ಪ್ರಶ್ನೆಗೆ ಉತ್ತರವನ್ನು ಎರಡನೇ ಮಂತ್ರ ನೀಡುತ್ತದೆ. ಯಾರು ಯೋಗ್ಯರೀತಿಯಿಂದ ಅಗ್ನಿಹೋತ್ರ ಮಾಡುತ್ತಾನೋ ಅವನ ಮನೆಯಲ್ಲಿ ವೇಗಶಾಲಿಗಳಾದ ಕುದುರೆಗಳು, ಧನಸಂಪತ್ತು ಮತ್ತು ಯಶಸ್ಸು ಸಿಕ್ಕುತ್ತದೆ. ಬೆಂಕಿ, ನೀರು, ಗಾಳಿ ಮತ್ತು ವಿದ್ಯುತ್ತು ಮುಂತಾದ ದೇವತೆಗಳು ಯಾವ ಅನಿಷ್ಟಗಳನ್ನೂ ಮಾಡುವುದಿಲ್ಲ.

"ಅಗ್ನಿಹೋತ್ರವನ್ನು ನಮ್ಮಲ್ಲನೇಕರು ಮಾಡುತ್ತಿದ್ದೇವೆ. ಆದರೆ ನಮಗಾರಿಗೂ ಧನ, ಯಶಸ್ಸು ಇತ್ಯಾದಿ ಸಿಗಲಿಲ್ಲವಲ್ಲಾ. ನಮಗೆ ದೇವಕೃತ ಅನಿಷ್ಟಗಳೂ, ಮನುಷ್ಯ ಕೃತ ಅನಿಷ್ಟಗಳೂ ಧಾರಾಳವಾಗಿಯೇ ಬೇಡ ಬೇಡವೆಂದರೂ ಲಭಿಸುತ್ತಿವೆಯಲ್ಲಾ"-ಎಂದು ಗೋಗರೆಯುವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಇದಕ್ಕೆ ಕಾರಣ ನಾವು 'ಸ್ವಧ್ವರ'ರಾಗದಿರುವುದೇ ಆಗಿದೆ. 'ಸ್ವಧ್ವರ' ಎಂದರೆ ಉತ್ತಮ ರೀತಿಯಲ್ಲಿ ಯಜ್ಞ ಮಾಡುವವನು. ನಾವು ಮಾಡುವ ಯಜ್ಞವನ್ನು ಉತ್ತಮ ರೀತಿಯಿಂದ ಮಾಡದಿರುವುದರಿಂದಲೇ ನಮಗೆ ಬೇಕಾದ ಫಲ ಸಿಕ್ಕುತ್ತಿಲ್ಲ. ಮಂತ್ರದಲ್ಲಿ 'ಯಾವನು ಸಮಿತ್ತು, ಆಹುತಿ, ವೇದ ಹಾಗೂ ನಮಸ್ಕಾರದಿಂದ ಭಗವಂತನಿಗೆ ನೀಡಬೇಕು. ಏನನ್ನು? ಭಾವುಕ ಜನರು ಹೇಳುತ್ತಾರೆ–ತಮ್ಮ ಆತ್ಮವನ್ನು! ಬೆಂಕಿ ಉರಿಸಿ ಮಂತ್ರಪೂರ್ವಕವಾಗಿ ಅದರಲ್ಲಿ ಆಹುತಿ ನೀಡುವುದು ಒಂದು ಚಿಹ್ನೆಯಾದರೆ, ಇನ್ನೊಂದು ಉನ್ನತ ಕ್ರಿಯೆಯ ದ್ಯೋತಕವೂ ಇದೆ. ಯಾವ ರೀತಿ ನಾವು ಸಮಿತ್ತು, ಆಹುತಿಗಳನ್ನು ಅರ್ಪಿಸಿದೆವೋ, ಅದೇ ರೀತಿ ನಮ್ಮನ್ನು ನಾವೇ ಪರಮ ಅಗ್ನಿಗೆ ಸಮರ್ಪಿಸಿಕೊಳ್ಳಬೇಕು. ಯಾವ ರೀತಿ ಸಮಿತ್ತು, ಹವ್ಯದ್ರವ್ಯಗಳ ಆಹುತಿಯನ್ನು ಹಾಕಿ ಅದರ ಇಚ್ಛೆಗ ಬಿಟ್ಟುಬಿಡುತ್ತೇವೋ ಅದೇ ರೀತಿ ನಮ್ಮನ್ನು ನಾವು, ನಮ್ಮ ಸರ್ವಸ್ವವನ್ನು, ಪರಮ ಅಗ್ನಿಯಾದ ಪರಮಾತ್ಮನಿಗೆ ಅರ್ಪಿಸಿಬಿಡಬೇಕು. ಪರಮಾತ್ಮನು ನಮ್ಮನ್ನು ಬೇಕಾದ್ದು ಮಾಡಲಿ. ಮಂತ್ರದಲ್ಲಿ 'ನಮಸಾ' ಎಂದರೆ, ಪೂರ್ಣ ಬಾಗುವ-ಪೂರ್ಣ ಸಮರ್ಪಿತವಾಗುವ ಭಾವ ಧ್ವನಿತವಾಗುತ್ತದೆ. ಅಗ್ನಿಹೋತ್ರದಲ್ಲಿ ಬೆಳಗು–ಬೈಗುಗಳಲ್ಲಿ ಐದೈದು ಬಾರಿ ಉಚ್ಚರಿಸುವ "ಅಯಂತ ಇಧ್ಮ ಆತ್ಮಾ"-ಮಂತ್ರದಲ್ಲಿ ನಾವು ಇದೇ ಆತ್ಮಸಮರ್ಪಣೆಯ ಮನೋಭಾವವನ್ನು ಕಾಣಬಹುದು. ಅಲ್ಲಿ ನಾವು ಹೇಳುತ್ತೇವೆ–"ಹೇ ಭಗವನ್! ಈ ನನ್ನ ಆತ್ಮ, ಈ ನನ್ನ ಸರ್ವಸ್ವ ನಿನ್ನ ಸಮಿತ್ತು. ಇದನ್ನು ಹೇಗೆಬೇಕೋ ಹಾಗೆ ಸುಡು, ರೂಪಿಸು. ನಿನಗೇನುಬೇಕೋ ಅದನ್ನು ಮಾಡು. ಈ ರೀತಿ ಆತ್ಮಸಮರ್ಪಣಾಪೂರ್ವಕ, ತನ್ನ ಸರ್ವಸ್ವವನ್ನು ಪರಮಾತ್ಮಾಗ್ನಿಯಲ್ಲಿ ಸಮರ್ಪಿಸುತ್ತಾನೋ ಅವನದೇ ನಿಜವಾದ ಅಗ್ನಿಹೋತ್ರ. ಅವನೇ ವೇದಗಳ ಭಾಷೆಯಲ್ಲಿ 'ಸ್ವಧ್ವರ" ಹೀಗಲ್ಲವಾದರೆ ಭೌತಿಕಾಗ್ನಿಯಲ್ಲಿ

ತುಪ್ಪ, ಸಮಿತ್ತುಗಳನ್ನರ್ಪಿಸುವುದು ಕೇವಲ ಮಾಂತ್ರಿಕ ಕ್ರಿಯೆಯಾದೀತು! ಇದರಿಂದ ವಾಯು ಜಲ ಶುದ್ಧಿ, ಆರೋಗ್ಯ ವರ್ಧನಗಳಂತಹ ಸಾಧಾರಣ ಫಲಗಳಂತಹವು ಮಾತ್ರ ಸಿಕ್ಕುತ್ತವೆ. ಇದಕ್ಕಿಂತಧಿಕ ಏನೂ ಸಿಕ್ಕದು.

ನಮ್ಮಲ್ಲಿ 'ಸ್ವಧ್ವರ'ರಾಗಿ ಅಗ್ನಿಹೋತ್ರ ಮಾಡುವವರು ಎಷ್ಟು ಮಂದಿ ಸಿಕ್ಕ ಬಹುದು? ಪರಮಾತ್ಮನ ಇಚ್ಛೆಯಂತೆ ಜಗತ್ತಿನ ನೂರೆಂಟು ಕಷ್ಟ-ಕೊಟಲೆಗಳನ್ನು ಸಂತೋಷದಿಂದ ಸ್ವೀಕರಿಸುವವರೆಷ್ಟು ಮಂದಿ ಸಿಕ್ಕಬಹುದು? ವಾಸ್ತವಿಕ ಅಗ್ನಿಹೋತ್ರವು ಆತ್ಮೋತ್ಕರ್ಷದ ಉನ್ನತ ಏಣಿಯಾಗಿದೆ. ನಾವಿದಕ್ಕೆ ತಯಾರಿದ್ದೇವೆಯೇ? ಯಾವ ಭಾವನೆಗಳನ್ನು ನಮ್ಮ ಹೃದಯಾಂತಃ ಸ್ಥಳದಲ್ಲಿ ನೆಲೆಮಾಡಿವೆ? ನಮಗೆ ಸ್ವಲ್ಪ ಕಷ್ಟಗಳುಂಟಾದರೆ ಸ್ವಲ್ಪ ಅನಿಷ್ಟ ತಲೆದೋರಿದರೆ ಪರಮಾತ್ಮನ ಮೇಲಿನ ಶ್ರದ್ಧೆ ಹಾಳಾಗುತ್ತದೆ. ಆ ಪ್ರಭುವಿನ ಇಚ್ಛೆಯಂತೆ ನಾವು ಆತ್ಮೋತ್ಸರ್ಗ ಸಾಧಿಸಲು ಎಲ್ಲಿ ತಯಾರಾಗಿದ್ದೇವೆ? ನಾವು ನಿಜವಾದ ಅರ್ಥದಲ್ಲಿ ಅಗ್ನಿಹೋತ್ರ ಮಾಡಲು ತೊಡಗಿದೆವಾದರೆ ಪ್ರಭುವಿನಲ್ಲಿ ಅಚಲವಾದ ವಿಶ್ವಾಸ ಮೂಡಿದುದಾದರೆ, ನಾವೆಲ್ಲವನ್ನು ಪರಮಾತ್ಮನಿಗಾಗಿ ಸಮರ್ಪಿಸಲು ಸಿದ್ಧರಾದರೆ—ಅಂತಹ ಅಗ್ನಿಹೋತ್ರ ನಮಗೆ ಬೇಕೆನಿಸಿದುದೆಲ್ಲವನ್ನೂ ತಂದೆರೆಯುವುದರಲ್ಲಿ ಸಂಶಯವಿಲ್ಲ. ಸರ್ವ ಶಕ್ತನೂ, ಸಚ್ಚಿದಾನಂದನೂ ಆದ ಪರಮಾತ್ಮನ ಸಾಮಿಪ್ಯದಲ್ಲಿರುವಾಗ ನಮಗೆ ಇನ್ನಾವುದರ ಕೊರತೆ ತಾನೇ ಬಾಧಿಸೀತು? ಆಗ ನಮ್ಮ ಜೀವನ ಒಂದು ವಿಜಯದಬೀಡು, ಸಂತಸದ ಗೂಡು, ಧನ್ಯತೆಯ ಮಡು. 'ಬಲ್ಲವನೇ ಬಲ್ಲ ಬೆಲ್ಲದ ಸವಿಯ'! ಅಂತಹ ಸವಿಯನ್ನುಣ್ಣುವ ಭಾಗ್ಯ ನಮಗೆಲ್ಲರಿಗೂ ಪ್ರಾಪ್ತವಾಗಲಿ.

---

## ದಯಾನಂದರ ಮತ್ತು ಅರವಿಂದರ ವೈದಿಕ ವಿಚಾರಗಳು

● ಮಂಜುನಾಥ ಶಾಸ್ತ್ರಿ, ಎಂ. ಎ. ಸಾಹಿತ್ಯರತ್ನ

ಮಹರ್ಷಿ ದಯಾನಂದರು ಹಾಗೂ ಮಹರ್ಷಿ ಅರವಿಂದರು—ಇಬ್ಬರೂ ಆಧುನಿಕ ಯುಗದ ಮಹಾಕ್ರಾಂತಿಕಾರಿಗಳೂ ಆಧ್ಯಾತ್ಮಿಕ ಜಗತ್ತಿನ ವೀರಯೋದ್ಧಾರರೂ ಆಗಿದ್ದರು. ಇಬ್ಬರ ದೃಷ್ಟಿಕೇಂದ್ರವೂ ವೇದವಾಗಿದ್ದು ಇಬ್ಬರೂ ವೇದಗಳೆಂಬ ನೇತ್ರಗಳ ಮೂಲಕ ಸತ್ಯವನ್ನು ಸಾಕ್ಷಾತ್ಕರಿಸಿದರು. ಇಬ್ಬರ ಲೇಖನ ಶೈಲಿಯೂ ವೇದೋಪನಿಷತ್ತುಗಳನ್ನು ಆಧಾರವಾಗಿಟ್ಟುಕೊಂಡಿತ್ತು.

ಆರ್ಯಸಮಾಜದ ಮುಖ್ಯ ಆಧಾರವೂ ವೇದವೇ ಆಗಿದೆ. ಆರ್ಯಸಮಾಜದ ಕಾರ್ಯಕ್ರಮದಿಂದ ವೇದವನ್ನು ತೆಗೆದುಹಾಕಿದ ಪಕ್ಷದಲ್ಲಿ ಆರ್ಯಸಮಾಜದ ಉಪಯೋಗಿತ್ವಕ್ಕೆ ಕುಂದುಂಟಾಗುತ್ತದೆ. ಶ್ರೀ ಅರವಿಂದರ ವೇದಸಂಬದ್ಧವಾದ ಕಾರ್ಯಗಳನ್ನು ಕುರಿತು ಬಹಳ ಕಡಿಮೆ ಜನರಿಗೆ ತಿಳುವಳಿಕೆಯಿದೆ. ಅವರ ವೇದವಿಷಯದ ಕಾರ್ಯಗಳ ಪ್ರಚಾರ-ಪ್ರಸಾರಗಳು ಸಾಕಷ್ಟು ವ್ಯಾಪಕರೀತಿಯಲ್ಲಿ ಆಗಿಲ್ಲ. ಆರ್ಯರೂ ಕೂಡ ಅರವಿಂದರ **ವೇದರಹಸ್ಯದ** ಮಹಿಮೆಯನ್ನು ಅರಿತುಕೊಳ್ಳುವುದು ಅವಶ್ಯಕವಿದೆ.

ಶ್ರೀ ಅರವಿಂದರು ಯೋಗಸಾಧನೆಗಾಗಿ ಪಾಂಡಿಚೇರಿಯನ್ನು ತಲಪಿ ನೂತನವಾದೊಂದು ಜೀವನ ಸರಣಿಯನ್ನು ಅಂಗೀಕರಿಸಿ **ಆರ್ಯ** ಎಂಬ ಮಾಸಪತ್ರಿಕೆಯೊಂದನ್ನು ಇಂಗ್ಲೀಷಿನಲ್ಲಿ ಹೊರಡಿಸಲನುವಾದರು. ಆ ಪತ್ರಿಕೆಯಲ್ಲಿ ಅರವಿಂದರು The Life Divine ದಿವ್ಯ ಜೀವನ ಮತ್ತು Secret of the Vedas ವೇದ ರಹಸ್ಯ ಎಂಬ ಎರಡು ಲೇಖನ ಮಾಲೆಗಳನ್ನು ಬರೆಯತೊಡಗಿದರು. ವೇದ ವಿಷಯಕ ಅವರ ಎರಡನೆಯ ಲೇಖನ ಮಾಲೆಯು ವೇದಗಳ ಗೂಢ ವಿಷಯಗಳನ್ನು ಬಯಲುಪಡಿಸುತ್ತದೆ. ವೇದಗಳ ನಿಜವಾದ ಪ್ರತಿಪಾದ್ಯ ವಿಷಯವೇನೆಂಬುದನ್ನು ಅದರಲ್ಲಿ ತಿಳಿಸಿರುವರು. ವೇದಗಳ ಕೆಲವು ಸೂಕ್ತಗಳನ್ನು ಆರಿಸಿ Selected Hymns ಎಂಬ ಶೀರ್ಷಕದಿಂದ ಅನುವಾದವನ್ನು ಪ್ರಕಟಪಡಿಸಿದರು. ವೇದ ರಹಸ್ಯದ ಮೂರು ಖಂಡಗಳಿವೆ. ಮೊದಲನೆಯ ಖಂಡದಲ್ಲಿ **ಪ್ರತಿಪಾದ್ಯ ವಿಷಯ** ಎರಡನೆಯದರಲ್ಲಿ **ದೇವತೆಗಳ ಸ್ವರೂಪ** ಮತ್ತು ಮೂರನೆಯದರಲ್ಲಿ **ಅಗ್ನಿಸ್ತುತಿ** ಎಂಬ ವಿಷಯಗಳಿವೆ. ಈ ವೇದರಹಸ್ಯದಲ್ಲಿ ವಿಸ್ತಾರವಾದ ಪ್ರಸ್ತಾವನೆ ಕೂಡ ಇದೆ. ಇದನ್ನವರು 1914ರಿಂದ 1916ರ ವರೆಗೆ ಬರೆದ ವೇದ ವಿಷಯಕ ಲೇಖನಗಳಿಗೆ 1946ರಲ್ಲಿ ಬರೆದರು. ಈ ವೇದರಹಸ್ಯದ ಅನುವಾದ ಹಲವು ಭಾಷೆಗಳಲ್ಲಾಗಿದೆ.

ಭಾರತ ವರ್ಷದಲ್ಲಿ ಜಾತಿಭೇದ, ವರ್ಗಭೇದ, ಸೀಮಾಭೇದ ಹಾಗೂ ಪ್ರಾಂತ ಭೇದದಿಂದಾಗಿ ಪಾರಸ್ಪರಿಕ ಕಲಹ, ವಿದ್ವೇಷ, ತಿರಸ್ಕಾರ ಮೊದಲಾದ ದೋಷಗಳು ಭಯಂಕರ ಸಾಂಕ್ರಾಮಿಕ ರೋಗಗಳಂತೆ ಹಬ್ಬಿಕೊಂಡಿವೆಯೆಂದು ಮಹರ್ಷಿ ದಯಾನಂದರು ತಮ್ಮ ದೂರದರ್ಶಿತ್ವದ ಮೂಲಕ ಅರಿತಿದ್ದರು. ಭಾರತೀಯರಿಗೆ ತಮ್ಮ ಅತೀತ ಯಥಾರ್ಥ ಇತಿಹಾಸದ ಅರಿವಾಗುವುದರಿಂದಲೇ ಈ ದೋಷಗಳು ದೂರವಾಗಬಲ್ಲವು. ಅದಕ್ಕಾಗಿ ಅವರು ಈ ದೇಶಕ್ಕೆ ಆರ್ಯಾವರ್ತವೆಂಬ ಪ್ರಾಚೀನ ಹೆಸರನ್ನು ಕೊಟ್ಟರು. ಪ್ರಾಚೀನ ಕಾಲದಿಂದ ಈ ದೇಶದಲ್ಲಿ ಆರ್ಯ, ಅನಾರ್ಯ ಇವರೇ ನಿವಾಸವಾಗಿದ್ದಾರೆ. ಆರ್ಯ ಎಂಬುದು ಜಾತಿವಾಚಕವಾಗಿರದೆ ಗುಣವಾಚಕವಾಗಿದೆ. ಸ್ವತಃ ಪ್ರಕೃತಿಜನ್ಯ, ಸಾತ್ವಿಕ, ಈಶ್ವರಭಕ್ತ, ಮೇಧಾವಿ, ಶ್ರೇಷ್ಠ ಹಾಗೂ ಧರ್ಮಪರಾಯಣನಾದವನು ಆರ್ಯನೂ, ತದ್ವಿಪರೀತ ಗುಣಗಳನ್ನು ಹೊಂದಿರುವವನು ಅನಾರ್ಯನೂ ಆಗಿರುವನು. ಮಹರ್ಷಿ ದಯಾನಂದರ ಸತ್ಯಾರ್ಥ ಪ್ರಕಾಶದಲ್ಲಿ ಆರ್ಯ ಶಬ್ದದ ವ್ಯಾಖ್ಯಾನವು ಸಂಕ್ಷೇಪವಾಗಿ ಸಿಗುತ್ತದೆ. ಆದರೆ, ಋಷಿ ಅರವಿಂದರ **ಆರ್ಯ** ಪತ್ರಿಕೆಯ ಲೇಖನಮಾಲೆಗಳಲ್ಲಿ ಆರ್ಯ ಅಥವಾ ಆರ್ಯಸಂಸ್ಕೃತಿಯ ವಿಸ್ತೃತ ವ್ಯಾಖ್ಯಾನವನ್ನು ನೋಡಿ ಹೃದಯವು ಹರ್ಷೋಲ್ಲಾಸವಿಭೋರವಾಗುತ್ತದೆ. ಶ್ರೀ ಅರವಿಂದರು ಬರೆಯುತ್ತಾರೆ.

## ಆರ್ಯನಾರು ?

"ಆರ್ಯನಾರು? ಭಗವಂತನ ದಿವ್ಯತೆಯ ಪರ್ವತದ ಒಂದು ಮೂಲೆಯಿಂದ ಇನ್ನೊಂದು ಮೂಲೆಯ ತನಕ ಹತ್ತಬಯಸುವವನು, ಯಾರಿಗೂ ಅಂಜದಿರುವವನು, ಯಾವುದೇ ವಿಶಾಲತ್ವ, ಉಚ್ಚತ್ವ ಹಾಗೂ ಮಹತ್ತ್ವದ ವಿಷಯದಲ್ಲಿ ಹಿಂಜರಿಯದಿರುವವನು ಆರ್ಯನು, ಅವನೇ ದಿವ್ಯ ಯೋದ್ಧಾ, ವಿಜೇತಾ, ಮಹಾನ್, ಅಭಿಜಾತ, ಉತ್ತಮ ಮತ್ತು ಗೀತೋಕ್ತ ಶ್ರೇಷ್ಠ ಪುರುಷನು.

"ತನ್ನ ಆಂತರಿಕ ಮೂಲಭೂತ ಅರ್ಥದ ಪ್ರಕಾರ ಆರ್ಯನೆಂದರೆ ಪ್ರಯತ್ನಶೀಲನು, ಊರ್ಧ್ವಗತಿಕರ್ತನು ಹಾಗೂ ವಿಜಯವನ್ನು ಗಳಿಸುವವನು. ಆತ್ಮ ವಿಜಯವೇ ಅವನ ಪ್ರಕೃತಿಯ ಪ್ರಥಮ ನಿಯಮವು. ಅವನು ತನ್ನ ಶರೀರದ ಮೇಲೆಯೂ ಪೃಥ್ವಿಯ ಮೇಲೆಯೂ ಪ್ರಭುತ್ವವನ್ನು ಸ್ಥಾಪಿಸುತ್ತಾನೆ. ತನ್ನ ಮನಸ್ಸನ್ನೂ ಅದರ ಅಭ್ಯಾಸಗಳನ್ನೂ ಮೀರಿಹೋಗುತ್ತಾನೆ. ಅವನು ಅಜ್ಞಾನದ ವಂಶಾನುಗತ ಪೂರ್ವಗ್ರಹಗಳ, ಪ್ರಚಲಿತ ರೂಢ ವಿಷಯಗಳ ಹಾಗೂ ರೋಚಕ ಸಮ್ಮತಿಗಳ ಕಠೋರ ಆವರಣದಲ್ಲಿ ಅಬದ್ಧನಾಗುವುದಿಲ್ಲ. ಅವನು ಸತ್ಯಾನ್ವೇಷಣ ಮಾಡುತ್ತಾನೆ, ಅದನ್ನೇ ಜೀವನದಲ್ಲಿ ಅಳವಡಿಸಿಕೊಳ್ಳುತ್ತಾನೆ. ಆರ್ಯನು ತನ್ನ ಒಳಗೆ ಹೊರಗೆ ಆತ್ಮ ಸಾಮ್ರಾಜ್ಯ ಸ್ಥಾಪನೆಗಾಗಿ ಸಂಘರ್ಷ ನಿರತನಾಗುತ್ತಾನೆ."

## ಅಗ್ನಿ ದೇವತೆಯ ಸ್ವರೂಪ

ವೇದರಹಸ್ಯದ ದ್ವಿತೀಯ ಭಾಗದಲ್ಲಿ "ಅಗ್ನಿ ದೇವತೆ"ಯ ಸ್ವರೂಪವನ್ನು ವರ್ಣಿಸುತ್ತಾ ಎಷ್ಟೊಂದು ಸುಂದರವಾಗಿ ಹೇಳಿರುವರು? ದಿವ್ಯಸಂಕಲ್ಪಗಳು ಅಂದರೆ ಅಗ್ನಿವಿರಹಿತನಾದವನು ಆರ್ಯನೆನಿಸಬಲ್ಲನೆ? ಆ ಅಗ್ನಿ (ಸಂಕಲ್ಪ)ಯ ಮೂಲಕ ಶ್ರಮವನ್ನೂ ಯುದ್ಧವನ್ನೂ ಸ್ವೀಕರಿಸುವವನು ವಿಜಯಗಳಿಸುತ್ತಾನೆ. ಕಷ್ಟವನ್ನು ಸಹಿಸಿ ವಿಜಯದುಂದುಭಿ ಮೊಳಗಿಸುವವನೇ ನಿಜವಾದ ಆರ್ಯನು.

ಇಬ್ಬರು ಋಷಿಗಳೂ ವೇದವನ್ನು ಭಾರತೀಯ ಸಂಸ್ಕೃತಿಯ ಮೂಲ ಬುಗ್ಗೆಯೆಂದು ನಂಬಿರುವರು. ವೇದದ ಗಂಭೀರ ಪ್ರತೀಕಗಳ ಹಾಗೂ ಒಗಟುಗಳ ಭೌತಿಕ ವ್ಯಾಖ್ಯಾನದಲ್ಲಿ ಆಧ್ಯಾತ್ಮಿಕ ಪರಿಪೂರ್ಣ ಸಾರಭೂತ ಅರ್ಥಗಳನ್ನು ಹೊರಗೆಡಹಿದರು. ನಿಜವಾದ ಅಭಿಪ್ರಾಯಗಳನ್ನು ನಮ್ಮೆದುರಿನಲ್ಲಿ ಪ್ರಕಟಪಡಿಸಿದರು.

ವೇದದ ತಳಹದಿಯ ಮೇಲೆ ನಿಜವಾದ ರಾಷ್ಟ್ರ ನಿರ್ಮಾಣ ಮಾಡುವ ಸುಖಸ್ವಪ್ನಗಳನ್ನು ಇಬ್ಬರೂ ಕಂಡರು. ಇಬ್ಬರೂ ಯೋಗವನ್ನು ಆಶ್ರಯವಾಗಿ ಪಡೆದರು. ಇಬ್ಬರೂ ತಮ್ಮ ಮುಕ್ತಿಗಾಗಿ ಅಲ್ಲ, ಸಂಪೂರ್ಣ ಮಾನವ ಸಮಾಜವನ್ನು ಅಜ್ಞಾನದಿಂದ ಮುಕ್ತಗೊಳಿಸಿ ವೇದೋಕ್ತ ಜ್ಞಾನದತ್ತ ಪ್ರೇರಿಸುವುದೇ ಉದ್ದೇಶ್ಯವಾಗಿತ್ತು. ಇಬ್ಬರೂ ಆಧ್ಯಾತ್ಮಿಕತೆಗೆ ಸರ್ವೋಪರಿಸ್ಥಾನವನ್ನಿತ್ತರು.

## ಸಿದ್ಧಾಂತ ಸಮಾನತೆ

ಆಧ್ಯಾತ್ಮಿಕತೆಯು ಭಾರತೀಯ ಸಂಸ್ಕೃತಿಯ ಮುಖ್ಯ ವಸ್ತುವು. ವೇದಗಳ ಮುಖ್ಯ ಅರ್ಥವೂ ಆಧ್ಯಾತ್ಮಿಕವಾಗಿದೆ ಭಾರತೀಯ ರಾಷ್ಟ್ರೀಯತೆಯ ಲಕ್ಷ್ಯವೂ ಸಹ ವಿಶ್ವದಲ್ಲಿ ಆಧ್ಯಾತ್ಮಿಕ ಅಭಿವ್ಯಕ್ತಿಯಾಗಿದ್ದು ಯೋಗವು ಸಹ ಆಧ್ಯಾತ್ಮಿಕತೆಯ ಕ್ರಿಯಾತ್ಮಕ ಪದ್ಧತಿಯಾಗಿದೆ. ಇಬ್ಬರೂ ಸಹ ನವೀನ ವೇದಾಂತಿಗಳ 'ಬ್ರಹ್ಮ ಸತ್ಯಂ ಜಗನ್ ಮಿಥ್ಯಾ' (ಬ್ರಹ್ಮವೊಬ್ಬನೇ ಸತ್ಯ, ಬೇರೆಲ್ಲವೂ ಸುಳ್ಳು) ಎಂಬ ಸಿದ್ಧಾಂತವನ್ನು ರಾಜಾರೋಷವಾಗಿ ಖಂಡಿಸಿರುವರು. ಪ್ರಪಂಚಾತ್ಮಕ ಜಗತ್ತಿನ ಸತ್ಯತ್ವವನ್ನು ಇಬ್ಬರೂ ಒಪ್ಪಿರುವರು. ವೇದಾಂತಿಗಳು ಪರಾತ್ಪರ ಜಗತ್ತಿನಲ್ಲಿ ಜೀವಾತ್ಮನ ನಿಜವಾದ ಅಸ್ತಿತ್ವವಿದೆಯೆಂಬುದನ್ನು

ನಂಬುವುದಿಲ್ಲ. ಇಬ್ಬರೂ ಪ್ರಖರತರ್ಕದ ಮೂಲಕ ಈ ವಿಚಾರವನ್ನು ಖಂಡಿಸುತ್ತಾ ಬ್ರಹ್ಮನು ಸತ್ಯವಾದಲ್ಲಿ ಅವನ ಜಗತ್ತು ಸುಳ್ಳಾಗಲಾರದೆಂದು ಪ್ರತಿಪಾದಿಸಿರುವರು. ಜಗತ್ತು ಭಗವಂತನ ಸಕ್ರಿಯ ಪಕ್ಷವಾಗಿದೆಯೇ ಹೊರತು ಬ್ರಹ್ಮನ ಅಜ್ಞಾನ ಜನ್ಯ ಭ್ರಾಂತಿಯಲ್ಲ. ಆತ್ಮನ ಅಸ್ತಿತ್ವವನ್ನೊಪ್ಪದೆ ಬರೇ ಕರ್ಮಗಳ ಅವಿಚ್ಛಿನ್ನ ಧಾರಾಪ್ರವಾಹವನ್ನೇ ಅನೇಕ ಜನ್ಮಜನ್ಮಾಂತರಗಳ ಮೂಲಕಾರಣವೆಂದು ನಂಬುವ ಬೌದ್ಧಧರ್ಮದ ಸಿದ್ಧಾಂತವನ್ನು ಇಬ್ಬರೂ ಖಂಡಿಸಿದ್ದಾರೆ. ಕರ್ಮಗಳ ಸಂಸ್ಕಾರಗಳು ಗುಣಗಳಾಗಿವೆಯೇ ಹೊರತು ಗುಣಿಗಳಾಗಿಲ್ಲ. ಗುಣವು ಗುಣಿಯನ್ನು ಆಶ್ರಯಿಸುತ್ತದೆ. ವಿದ್ವಾಂಸನೊಬ್ಬನ ವಿದ್ವತ್ತು ವಿದ್ವಾಂಸನೊಳಗಿರುತ್ತದೆಯೇ ವಿನಹ ಅವನಿಂದ ಬೇರಾಗಿರಲಾರದು. ಶ್ರೀ ಅರವಿಂದರು ಪುನರ್ಜನ್ಮ ಸಿದ್ಧಾಂತವನ್ನು 'ದಿವ್ಯ ಜೀವನ'ದಲ್ಲಿ ವೈಜ್ಞಾನಿಕ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ಕ್ರೈಸ್ತರ, ಮುಸ್ಲಿಮರ ಹಾಗೂ ಜಡವಾದಿಗಳ ಪುನರ್ಜನ್ಮವನ್ನು ಅಲ್ಲಗಳೆಯುವ ಅಪೂರ್ಣ, ಸಾರಹೀನ ಮತ್ತು ಅವೈಜ್ಞಾನಿಕ ಯುಕ್ತಿಗಳನ್ನು ತೀವ್ರವಾಗಿ ಖಂಡಿಸಿದ್ದಾರೆ.

ಇಬ್ಬರೂ ಪ್ರವೃತ್ತಿಪರಕ ಮಾರ್ಗವನ್ನವಲಂಬಿಸಿದ್ದಾರೆ. ಋಷಿ ದಯಾನಂದರು ಪ್ರವೃತ್ತಿ ಮೂಲಕ ಮಾರ್ಗವನ್ನು ವೇದಗಳನ್ನನುಸರಿಸಿಯಲ್ಲ. ಮನುಸ್ಮೃತಿಯನ್ನು ಆಧಾರವಾಗಿಟ್ಟುಕೊಂಡು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸರೂಪವಾಗಿ ಅಂಗೀಕರಿಸಿರುವರು. ಆದರೆ, ಶ್ರೀ ಅರವಿಂದರು ಗೀತೆಯ (೫. ೧೩.)

> ಸರ್ವ ಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।
> ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥

ಎಂದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ

ಆತ್ಮವಶಿಯಾದ ಯೋಗಿಯು ಶರೀರದಿಂದಲ್ಲ ಮನಸ್ಸಿನಿಂದಲೇ ಎಲ್ಲಾ ಕರ್ಮಗಳನ್ನೂ ಕರ್ಮಫಲಾಸಕ್ತಿಯನ್ನೂ ತ್ಯಜಿಸುತ್ತಾನೆ. ಅವನ ಜೀವನದಲ್ಲಿ ನಡೆಯುವ ಘಟನೆಗಳೆಲ್ಲವೂ ಬ್ರಹ್ಮಪ್ರೇರಣೆಯಿಂದಲೇ ನಡೆಯುತ್ತವೆ. ದೇಹವೆಂಬ ನವದ್ವಾರಗಳುಳ್ಳ ಪುರದಲ್ಲಿರುವ ಇಂತಹ ಆತ್ಮನು ಎಲ್ಲವನ್ನೂ ಮಾಡುತ್ತಲೂ ಮಾಡಿಸುತ್ತಲೂ ಏನೂ ಮಾಡುತ್ತಿರುವುದೂ ಇಲ್ಲ. ಮಾಡಿಸುತ್ತಿರುವುದೂ ಇಲ್ಲ.

ಮಹರ್ಷಿ ದಯಾನಂದರು ವೇದದ ಕಾರ್ಯವನ್ನು ಎಲ್ಲಿ ಬಿಟ್ಟುಹೋದರೋ ಅಲ್ಲಿಂದ ಶ್ರೀ ಅರವಿಂದರು ಉತ್ತಮ ವಿಧಿಯಿಂದ ಪೂರ್ಣಗೊಳಿಸಲು ಪ್ರಯತ್ನಿಸಿರುವರೆಂದು ನಿಃಸ್ಸಂಕೋಚವಾಗಿ ಹೇಳಬಹುದು. ಶ್ರೀ ಅರವಿಂದರು ವೇದಗಳೊಂದಿಗೆ ಆಧ್ಯಾತ್ಮಿಕವಾದವನ್ನು ಸೇರಿಸಿದ್ದಾರೆ. ಅದನ್ನು ನಾವು ಉಪೇಕ್ಷಿಸಬಾರದು.

---

"ಸತ್ಯವನ್ನೇ ಶಕ್ತಿಯನ್ನಾಗಿ ಉಳ್ಳ ಮಾನವರೇ! ನೀವು ನಿಮ್ಮ ಸ್ವಂತ ಆತ್ಮ ಬಲದಿಂದ, ನಿಮ್ಮ ಒಳಗೇ ಅಡಗಿದ್ದು ಪ್ರಹಾರ ಮಾಡುವ ದುರ್ಗುಣಗಳನ್ನು ಹೊರಗೆಡಹಿರಿ. ಜ್ಞಾನದ ವಜ್ರದಿಂದ ಅವುಗಳನ್ನು ಸೀಳಿಹಾಕಿರಿ.

—ಋಗ್ವೇದ.

# ತಪಸ್ಸೆಂದರೇನು?

**ಸ್ವಾಮಿ ಆತ್ಮಾನಂದ ಸರಸ್ವತಿ**

ತಪಸ್ಸೆಂಬುದು ಯಾವುದಾದರೊಂದು ಕ್ರಿಯದ ಹೆಸರಲ್ಲ. 'ತಪ' ಧಾತುವಿನಿಂದ ಬಂದ ತಪಸ್ ಶಬ್ದಕ್ಕೆ ಸಹನೆ ಮಾಡುವುದು ಮತ್ತು ಸಂತಾಪವನ್ನಿಯುವುದೆಂಬ ಅರ್ಥವಾಗುತ್ತದೆ. ತಾತ್ಪರ್ಯವಿಷ್ಟೇ, ಶರೀರದ ಸಮಸ್ತ ಶಕ್ತಿಗಳನ್ನು ಅವುಗಳ ಸ್ವಚ್ಛಂದ ಪ್ರವಾಹದಿಂದ ಬೇರ್ಪಡಿಸಿ ಅಂತರ್ಮುಖ ಮಾಡಲು, ಮನಸ್ಸು ಮತ್ತು ಇಂದ್ರಿಯಗಳನ್ನು ವಿಷಯ ವಾಸನೆಯಿಂದ ದೂರವಿರಿಸಿ ಆತ್ಮಚಿಂತನದಲ್ಲಿರಿಸಲು ನಿರಂತರ ಪರಿಶ್ರಮ ಪಡಬೇಕಾಗುತ್ತದೆ ಹಾಗೂ ಅನೇಕ ಕ್ಲೇಶಗಳನ್ನು ಸಹಿಸಬೇಕಾಗುತ್ತದೆ. ಈ ಕ್ಲೇಶಗಳನ್ನು ಉದಾರ ವೃತ್ತಿಯಿಂದ ಸಹಿಸುತ್ತಾ ತನ್ನ ಮಾರ್ಗದಲ್ಲಿ ಉತ್ಸಾಹಪೂರ್ವಕ ಮುಂದುವರಿಯುವ ಸಂಕಲ್ಪವೇ ತಪಸ್ಸೆನಿಸುತ್ತದೆ.

ತಪಸ್ಸು ಮಾನವನನ್ನು ಪುತ್ತಳಿ ಚಿನ್ನದಂತೆಸಗುತ್ತದೆ. ಅವನ ವಾಣಿ ಮತ್ತು ಕಾರ್ಯಗಳು ತಪಸ್ಸಿನ ಪ್ರಭಾವದಿಂದ ಒಂದೇ ಭಾವನೆಯನ್ನನುಸರಿಸುತ್ತವೆ, ಅವುಗಳ ಮಾರ್ಗ ಬೇರೆ ಬೇರೆಯಾಗಿರುವುದಿಲ್ಲ. ಮನಸ್ಸು, ವಾಣಿ ಮತ್ತು ಕಾರ್ಯಗಳಲ್ಲಿ ಏಕ ಭಾವವನ್ನೆಸಗುವುದು ಸಾಮಾನ್ಯ ಕಾರ್ಯವಲ್ಲ. ಅದಕ್ಕಾಗಿ ಮಾನವನು ನಿರಂತರ ಪರಿಶ್ರಮ ಪಡಬೇಕಾಗುತ್ತದೆ. ಈ ಭಾವನೆಯನ್ನೇ ಸತ್ಯವೆನ್ನುತ್ತಾರೆ ಮತ್ತು ಸತ್ಯದ ಉತ್ಪತ್ತಿಯು ತಪಸ್ಸಿನಿಂದಾಗುತ್ತದೆ.

ವಿಷಯ ವಾಸನೆಯ ಬಲೆಯಲ್ಲಿ ಸಿಲುಕಿ ಮಾನವನು ವಸ್ತುವಿನ ಯಥಾರ್ಥ ರೂಪವನ್ನರಿಯಲು ಅಸಮರ್ಥನಾಗುತ್ತಾನೆ, ರಾಗ ದ್ವೇಷಾದಿ ಅಂತರಂಗ ಶತ್ರುಗಳು ಆತನನ್ನು ಭ್ರಾಂತಿಯನ್ನುಂಟುಮಾಡುವ ಚಕ್ರವ್ಯೂಹದಲ್ಲಿ ಸಿಲುಕಿಸಿ ವಸ್ತುವಿನ ವಾಸ್ತವಿಕ ರೂಪವನ್ನು ಅವನ ಕಣ್ಣುಗಳಿಂದ ದೂರವಿರಿಸುತ್ತವೆ. ಅವು ಆತನ ಮೇಲೆ 'ನಾನು ನನ್ನದು' ಎಂಬುದರ ಬಣ್ಣ ಹಚ್ಚಿ ಆತನನ್ನು ಬೇರೆಯೇ ಮಾನವನನ್ನಾಗಿ ಮಾಡುತ್ತವೆ. ತಪಶ್ಚರ್ಯೆಯಿಂದ ಆ ಬಣ್ಣ ತೊಳೆದು ಹೋಗುತ್ತದೆ. ಅಜ್ಞಾನದ ಸಂಹಾರವೂ, ಜ್ಞಾನದ ಪ್ರಾದುರ್ಭಾವವೂ ಆಗುತ್ತದೆ. ಈ ರೀತಿ ತಪಸ್ಸಿನ ಹೊರತು ಇನ್ನೊಂದು ಗುಣವಾದ ಜ್ಞಾನವೂ ಸಹ ತಪಸ್ಸಿನಿಂದಲೇ ಹುಟ್ಟುತ್ತದೆ.

ಸತ್ಯ ಮತ್ತು ಜ್ಞಾನ — ಇವೆರಡೇ ಆತ್ಮನ ನಿಜವಾದ ಸಂಪತ್ತಾಗಿವೆ. ಆತ್ಮನ ಹತ್ತಿರ ಇವುಗಳ ಭಂಡಾರವಿರದಿರುವ ತನಕ ಅವನ ಮೂಟೆ ಬರಿದಾಗಿದ್ದು ಅವನ ಅಂತಃಕರಣದ ಕೋಶವಲ್ಲಿ ಒಂದೇ ಒಂದು ಕಾಸೂ ಕೂಡ ಇರುವುದಿಲ್ಲ. ತನ್ನ ಹತ್ತಿರ ಒಂದು ಕಾಸೂ ಇಲ್ಲದ ಮಾನವನು ಬೇರೆಯವರಿಗೇನು ತೆರಬಲ್ಲನು? ಅದೇ ಸತ್ಯ ಮತ್ತು ಜ್ಞಾನದ ಉತ್ಪತ್ತಿಯಾದ ಮೇಲೆ ಆತ್ಮನ ಕೋಶವು ತುಂಬಿ ಅಕ್ಷಯ ಕೋಶವಾಗುತ್ತದೆ. ಆಗ ಆ ಕೋಶದ ಮಹತ್ವವನ್ನರಿತು ಮಾನವನು ಬೇರೆಯವರಿಗೆ ಹಂಚಲು ತವಕಪಡುತ್ತಾನೆ. ಆಗ ಅವನಲ್ಲಿ ದಾನದ ಶಕ್ತಿಯೂ ಅಭಿಲಾಷೆಯೂ ಹುಟ್ಟುತ್ತದೆ.

ಈ ಶಕ್ತಿ ಉತ್ಪನ್ನವಾದ ಮೇಲೆ ಉಪಾಸಕನು ಬಹು ಉದಾರನಾಗುತ್ತಾನೆ. ತನ್ನ ಈ ಕರ್ತವ್ಯಪಾಲನೆಯಿಂದ ಅವನಿಗೆ ಪರಮ ಸಂತೋಷವಾಗುತ್ತದೆ. ಅವನ ಹೃದಯ ಸಾಗರದಲ್ಲಿ ಶಾಂತಿಯ ಗಂಭೀರ ಹಾಗೂ ಪ್ರಶಾಂತ ತರಂಗಗಳು ಉಕ್ಕೇರಿ ಬರತೊಡಗುತ್ತವೆ. ಆಗ ಅತಿ ಪ್ರಬಲ ಸಾಂಸಾರಿಕ ವಿಘ್ನಗಳೂ ಸಹ ಆತನನ್ನು ವಿಚಲಿತಗೊಳಿಸಲಾರವು. ಕ್ರೂರಾತಿಕ್ರೂರ ಪ್ರಾಣಿಯು ಪ್ರತಸ್ತ ಆತ್ಮಕ್ಕೂ ಅವನ ಶಾಂತಿಜಲ ವರ್ಷಣದಿಂದ ತನ್ನ ಕ್ರೂರ ಸ್ವಭಾವವನ್ನು ತ್ಯಜಿಸಬೇಕಾಗುತ್ತದೆ. ಅವನ ಪ್ರಭಾವದ ನೆರಳಿನಲ್ಲಿ ನಿಂತು ವಿರೋಧಿಗಳೂ ತಮ್ಮ ವಿರೋಧವನ್ನು ಬಿಟ್ಟುಬಿಡುತ್ತವೆ. ಈ ಶಾಂತಿಯ ಸತತ ಅಭ್ಯಾಸದಿಂದಲೇ ಅವನ ವಿಶಾಲ ಅಂತಃಕರಣದಲ್ಲಿ ವಿಶಾಲ ಅವಕಾಶವು ಪ್ರಾದುರ್ಭವಿಸುತ್ತದೆ. ಆ ಅವಕಾಶವು ಎಷ್ಟೊಂದು ವಿಶಾಲವಾಗಿದೆಯೆಂದರೆ, ಅದರಲ್ಲಿ ಜಗತ್ತಿನ ಸಣ್ಣ ಪ್ರಾಣಿ ಮೊದಲ್ಗೊಂಡು ದೊಡ್ಡ ದೊಡ್ಡ ಪ್ರಾಣಿಗಳೂ ಮಂಡಿಸಬಲ್ಲವು. ಎಲ್ಲಾ ಪ್ರಾಣಿಗಳ ಕ್ಲೇಶ ಮತ್ತು ಆನಂದದ ತರಂಗಗಳು ಅವನ ಅಂತಃಕರಣದ ತರಂಗಗಳೊಂದಿಗೆ ಎರಚನವಾಗುತ್ತವೆ. ಅವುಗಳ ಕ್ಲೇಶ ಮತ್ತು ಆನಂದವನ್ನನುಭವಿಸುತ್ತಾ ಅವನ್ನು ಆತ ತನ್ನವೆಂದು ತಿಳಿಯಲು ವಿವಶನಾಗುತ್ತಾನೆ.

ತನ್ನ ಎಲ್ಲ ಸಮಯವನ್ನು ಪರೋಪಕಾರಕ್ಕೆ ಮುಡಿಪಾಗಿಟ್ಟು ಉಪಾಸಕನು ತನ್ನ ನೇತ್ರ, ವಾಣಿ ಮತ್ತು ಶ್ರೋತ್ರ—ಇವುಗಳ ಉಪಕ್ರಿಯೆಗಳನ್ನು ಬೇರೆಯವರ ಹಿತಕ್ಕಾಗಿ ಮಾಡುತ್ತಾನೆ. ಅವನು ದೀನರ ದುಃಖಿತರ ಹಾಗೂ ಅಜ್ಞಾನಿಗಳ ಉಪಕಾರವನ್ನು ಗಮನದಲ್ಲಿಟ್ಟುಕೊಂಡು ಅವನು ಕಾಲುಗಳಿಂದ ನಡೆಯುತ್ತಾನೆ. ಮಸ್ತಿಷ್ಕದ ಜ್ಞಾನತಂತುಗಳಿಂದಲೂ, ಬುದ್ಧಿಯಿಂದಲೂ ಆ ಪ್ರಾಣಿಗಳ ಹಿತವನ್ನು ನಿರ್ಣಯಿಸುತ್ತಾನೆ. ಮನಸ್ಸಿನಿಂದ ಅವುಗಳ ಶ್ರೇಯಸ್ಸನ್ನು ಬಯಸುತ್ತಾನೆ. ತನ್ನ ಭುಜಬಲವನ್ನು ಅವುಗಳಿಗಾಗಿಯೇ ಪ್ರಯೋಗಿಸುತ್ತಾನೆ. ಹೆಚ್ಚೇನು ಹೇಳೋಣ? ಆತನು ತನ್ನ ಸರ್ವಸ್ವವಾದ ಆತ್ಮಿಕ ಆನಂದವನ್ನು ಕೂಡ ತನ್ನ ಪ್ರಿಯರೂ ದುಃಖಿಗಳೂ ಆದ ಪ್ರಾಣಿಗಳಿಗಾಗಿ ಧಾರೆಯೆರೆಯಲು ಕಟಿಬದ್ಧನಾಗುತ್ತಾನೆ. ವ್ಯವಹಾರದ ಈ ಅದ್ಭುತ ದೃಶ್ಯವು ಮಹಾತ್ಮ ಬುದ್ಧ ಮತ್ತು ಮಹರ್ಷಿ ದಯಾನಂದರಂತಹ ಮಹಾಪುರುಷರ ಜೀವನದಲ್ಲಿ ಸ್ಪಷ್ಟವಾಗಿ ಬೆಳಗುವುದನ್ನು ನಾವು ಕಾಣಬಲ್ಲೆವು. ತಪೋಮಯ ಜೀವನವನ್ನು ಧರಿಸಿ ಈ ಕ್ರಮಿಕ ಉನ್ನತಿಯತ್ತ ಗಮನವೀಯುತ್ತಾ ತಮ್ಮ ಜೀವನಯಾತ್ರೆಯನ್ನು ಪ್ರಾರಂಭಿಸುವ ಉಪಾಸಕರು ತಮ್ಮ ಜೀವನದಲ್ಲಿ ಅಘಮರ್ಷಣದ ಜ್ವಲಂತ ದೃಶ್ಯವನ್ನು ಕಾಣುತ್ತಾರೆ.

(ಸಂಧ್ಯಾ ಅಷ್ಟಾಂಗಯೋಗದಿಂದ)

---

ಪ್ರಿಯ ಮಾನವ! ಪ್ರಕೃತಿಗೆ ನೀನು ಅಧೀಶ್ವರನಾಗಿ ಅದರಿಂದ ಲಭಿಸಬಹುದಾದ ಸುಖಗಳನ್ನೆಲ್ಲಾ ಅವಶ್ಯವಾಗಿ ಗಳಿಸಿಕೋ. ಆದರೆ ನಿನ್ನ ತಲೆ ಪ್ರಕೃತಿಯ ಮುಂದಲ್ಲ; ಚೇತನನೂ, ನಿನ್ನ ಏಕೈಕ ಸ್ವಾಮಿಯೂ ಆದ ಪರಮಾತ್ಮನ ಮುಂದೆ ಮಾತ್ರ ಬಾಗಲಿ.

**—ಮಹರ್ಷಿ ದಯಾನಂದ.**

# ಎಚ್ಚರಿಕೆ ಇಂತಹ ಮಿತ್ರರೂ ಇದ್ದಾರೆ

ಡಾಕ್ಟರ್ ರಾಮನಾಥ ವೇದಾಲಂಕಾರ

ಸಖಾಯಸ್ತೇ ವಿಷುಣಾ ಅಗ್ನ ಏತೇ
ಶಿವಾಸಃ ಸಂತೋ ಅಶಿವಾ ಅಭೂವನ್ ।
ಅಧೂರ್ಷತ ಸ್ವಯಮೇತೇ ವಚೋಭಿ-
ರ್ಋಜೂಯತೇ ವೃಜಿನಾನಿ ಬ್ರುವಂತಃ ॥ [ಋಕ್. ೫ ೧೨-೫]

ಅರ್ಥ—(ಅಗ್ನೇ) ಹೇ ಉನ್ನತಿ ಶೀಲ ಮಾನವ! (ಏತೇ ತೇ ಸಖಾಯಃ) ನಿನ್ನ ಈ ಸ್ನೇಹಿತರು (ವಿಷುಣಾ) ಬಹಳ ವಿಷಮವಾಗಿದ್ದು (ಶಿವಾಸಃ ಸಂತಃ) ಮೊದಲು ಶಿವರೂಪನಾಗಿದ್ದರು, ಆದರೆ ಈಗ (ಅಶಿವಾಃ ಅಭೂವನ್) ಅಶಿವರಾಗಿರುವರು. (ಏತೇ) ಇವರು (ಋಜೂಯತೇ) ಸರಳ ಆಚರಣವುಳ್ಳ ನಿನಗೆ (ವೃಜಿನಾನಿ ಬ್ರುವಂತಃ) ಕುಟಿಲಪರಾಮರ್ಶಗಳನ್ನೀಯುತ್ತಾ (ವಚೋಭಿಃ) ಮಾತುಗಳ ಮೂಲಕ (ಸ್ವಯಂ) ತಾವಾಗಿಯೇ (ಅಧೂರ್ಷಪ) ಹಾನಿಯೊದಗಿಸುತ್ತಾರೆ.

ಹೇ ಮಾನವ! ನೀನು ಅಗ್ನಿಯು, ಊರ್ಧ್ವಗಾಮಿಯು, ಉನ್ನತಿಯತ್ತ ಅಗ್ರಸರನಾಗುವವನು. ಉನ್ನತಿಯ ಮಾರ್ಗದಲ್ಲಿ ಸಹಾಯಕರೆಂದು ಭಾವಿಸಿ ನೀನು ಬಹುಮಂದಿ ಸಾಂಸಾರಿಕ ಮಿತ್ರರನ್ನು ಕಟ್ಟಿಕೊಂಡಿರುವೆಯೇ. ನಿಜವಾಗಿಯೂ ಅವರು ಸಂಕಟಕಾಲದಲ್ಲಿ ನಿನಗೆ ಸಹಾಯ ಮಾಡುತ್ತ ಬಂದಿದ್ದಾರೆ. ನೀನು ಮಾರ್ಗ ಮರೆತುಹೋದಾಗಲೆಲ್ಲ ಅವರು ನಿನಗೆ ಸತ್ಪರಾಮರ್ಶವನ್ನು ನೀಡಿತ್ತಿರುವರು. ನೀನು ಹತೋತ್ಸಾಹನಾಗಿ, ನಿರಾಶನಾಗಿ ಕುಳಿತಾಗ ಅವರು ನಿನ್ನನ್ನು ಮುಂದುವರಿಯಲು ಹುರಿದುಂಬಿಸಿದ್ದಾರೆ. ನೀನು ಕಾಮ, ಕ್ರೋಧ, ಲೋಭ ಮೊದಲಾದುವುಗಳ ವಶವರ್ತಿಯಾಗಿ ಉನ್ನತಿಯ ದಾರಿ ಬಿಟ್ಟು ಅವನತಿಯತ್ತ ಹೊರಟಾಗ ನಿನ್ನನ್ನು ಎಚ್ಚರಿಸಿರುವರು.

ನೆನಪಿದೆಯಲ್ಲವೆ? ಒಂದು ಸಲ ನೀನು ಕುಸಂಗಕ್ಕೊಳಪಟ್ಟು, ಕಾಮುಕನಾಗಿದ್ದೆ, ನಿನ್ನ ಆಗುಹೋಗುಗಳು ಸರಿಯಾಗಿರಲಿಲ್ಲ. ಆಗ ನಿನ್ನ ಮಿತ್ರರಿಗಿದು ತಿಳಿದು ಬಂದು ಅವರು ನಿನ್ನನ್ನು ಬಹಳವಾಗಿ ಧಿಕ್ಕರಿಸಿದರು. ಅವರ ಆ ತರ್ಜನೆಯಿಂದ ನಿನ್ನ ಜೀವನವು ಸರಿದಾರಿಗೆ ಬಂತು. ಅಂತೆಯೇ ನೀನೊಂದು ಬಾರಿ ಕ್ರೋಧಕ್ಕೆ ವಶವರ್ತಿಯಾಗಿ ತನ್ನತನವನ್ನೇ ಮರೆತು ಬಿಟ್ಟು ಧರ್ಮಪರಾಯಣೆಯಾದ ಸಹಧರ್ಮಿಣಿಯನ್ನು ನರಕಯಾತನೆಗೊಳಪಡಿಸಿದ್ದೆ. ಆಗಲೂ ನಿನ್ನ ಮಿತ್ರರು ನಿನಗೆ ಸರಿದಾರಿದೋರಿದರು. ಅವರ ಶಿಕ್ಷಣ, ಉಪದೇಶದಿಂದಾಗಿ ನಿನ್ನ ಸ್ವಭಾವವೇ ದಯಾಮಯವೂ, ಶಾಂತವೂ ಆಯಿತು. ನಿನ್ನ ಮೇಲಡರಿ ನಿಂತ ಕ್ರೋಧವೆಂಬ ಭೂತವು ಬಹುದೂರ ಕಂಬಿಕಿತ್ತಿತು.

ಒಂದು ಸಲ ನಿನ್ನ ಮೇಲೆ ಲೋಭ ಆಕ್ರಮಣ ಮಾಡಿತು. ಅದರ ವಶನಾದ ನೀನು ಒಳ್ಳೆಯ, ಕೆಟ್ಟ ಉಪಾಯಗಳಿಂದ ನೀನು ಹಣಗಳಿಸತೊಡಗಿದೆ. ಕಾಳಸಂತೆಯ

ವ್ಯಾಪಾರಕ್ಕೆ ತೊಡಗಿದೆ, ಲಂಚ ಪಡೆಯಲೆತ್ನಿಸಿದೆ. ವ್ಯಾಪಾರದ ವಸ್ತುಗಳಲ್ಲಿ ಮಿಶ್ರಣ ಮಾಡಲನುವಾದೆ. ಬೇರೆಯವರಿಂದ ಸಾಲ ಪಡೆದು ಅದನ್ನು ಪಾವತಿ ಮಾಡಲೊಪ್ಪಲಿಲ್ಲ. ಆಗಲೂ ನಿನ್ನನ್ನು ಮಿತ್ರರು ಸರಿದಾರಿಗೆ ಹಚ್ಚಿದರು. ಅವರ ಸಲಹೆಯನ್ನು ಮನ್ನಿಸಿ ನೀನು ಪಾಪಪುಣ್ಯಗಳ ವಿವೇಕ ಮಾಡತೊಡಗಿ ವೇದಗಳ ಶಬ್ದಗಳಲ್ಲಿ ಘೋಷಿಸಿದೆ—

ಏತಾ ಏನಾ ವ್ಯಾಕರಂ ಖಲೇ ಗಾ ವಿಷ್ಠಿತಾ ಇವ।
ರಮಂತಾಂ ಪುಣ್ಯಾ ಲಕ್ಷ್ಮೀರ್ಯಾಃ ಪಾಪಿಸ್ತಾ ಅನೀನಶಂ ॥

[ಅಥರ್ವ:—೭.೧.೫.೪]

ಅಂದರೆ, ಈಗ ನಾನು ನನ್ನ ಹತ್ತಿರ ಬಂದ ಲಕ್ಷ್ಮಿ (ಹಣ)ಯನ್ನು ಒಂದೊಂದಾಗಿ ಪರೀಕ್ಷಿಸುತ್ತಿದ್ದೇನೆ. ಯಾವ ರೀತಿ ಹಟ್ಟಿಗೆ ಬಂದ ಗೋವುಗಳನ್ನು 'ಯಾವುದು ನನ್ನದು ಮತ್ತು ಯಾವುದು ಬೇರೆಯವರದೆ'ಂದು ಗುರುತಿಸುತ್ತಾರೆಯೋ, ಅಂತೆಯೇ ಪುಣ್ಯ ಲಕ್ಷ್ಮಿಯನ್ನು ನನ್ನ ಮನೆಯಲ್ಲಿರಬಿಟ್ಟು ಪಾಪ ಲಕ್ಷ್ಮಿಗಳನ್ನು ಹೊಡೆದೋಡಿಸುತ್ತೇನೆ.

ಒಂದು ಬಾರಿ ನೀನು ಮೋಹಗ್ರಸ್ತನಾಗಿ ತನ್ನವರನ್ನು ಹೆರವರೆಂದೂ, ಹೆರವರನ್ನು ತನ್ನವರೆಂದೂ ತಿಳಿಯಲನುವಾಗಿ; ಅಜ್ಞಾನ, ಅವಿವೇಕ ಮತ್ತು ಮೋಹ, ಮಾಯೆಯು ಭೂತ ನಿನ್ನ ತಲೆಯ ಮೇಲಡರಿದಾಗಲೂ ಮಿತ್ರರು ನಿನ್ನನ್ನು ಉದ್ಧರಿಸಿದರು. ಒಂದು ಸಲ ನೀನು ಮದ ಅಥವಾ ಅಭಿಮಾನದ ಅಮಲಿಗೂ ತುತ್ತಾದೆ. ತನ್ನನ್ನು ಮಹಾಮೇಧಾವಿಯೆಂದೂ, ಜ್ಞಾನಿಯೆಂದೂ ತಿಳಿಯತೊಡಗಿದೆ. ಯಾರೂ ತನಗೆ ಸಮಾನರಾಗಿಲ್ಲವೆಂದು ತಿಳಿದೆ. ಆಗ ನಿನ್ನ ಮಿತ್ರರೇ ನಿನ್ನ ಅಭಿಮಾನವನ್ನು ದೂರಪಡಿಸಿ ನಿನಗೆ ನಿನ್ನ ಅಲ್ಪಜ್ಞತೆ ಹಾಗೂ ಅಲ್ಪಸಾಮರ್ಥ್ಯದ ಬೋಧವನ್ನು ಮಾಡಿದರು. ಒಂದು ಸಲ ನಿನ್ನನ್ನು ಮತ್ಸರವು ಮುತ್ತಿಕೊಂಡಿತು. ಬೇರೆಯವರ ಉನ್ನತಿಯನ್ನು ಕಂಡು ರೇಗಿಕೊಂಡೆ, ಇತರರ ಶುಭಕರ್ಮಗಳನ್ನು ಕಂಡು ದ್ವೇಷಕ್ಕೊಳಗಾದೆ. ಬೇರೆಯವರ ಉನ್ನತಿಯನ್ನೂ, ಶುಭಕಾರ್ಯಗಳನ್ನೂ ಕಂಡು ನೀನು ಉನ್ನತಿಯತ್ತ ಸಾಗಲೂ, ಶುಭಕಾರ್ಯಗಳನ್ನೂ ಮಾಡಲೂ ಪ್ರೇರಣೆ ಪಡೆಯಬೇಕಾಗಿತ್ತು. ಆದರ ಬದಲಾಗಿ ನೀನು 'ಇವರನ್ನು ಹೇಗೆ ಉನ್ನತಿಯ ಮೆಟ್ಟಲುಗಳಿಂದ ಕೆಳಗಿಳಿಸೋಣ, ಶುಭಕಾರ್ಯಗಳಿಗೆ ಕಲ್ಲು ಹಾಕೋಣ?' ಎಂದು ಯೋಚಿಸತೊಡಗಿದಾಗಲೂ ಮಿತ್ರರು 'ನೀನು ಅಶುಭಭಾವನಾವಶವರ್ತಿಯಾಗುತ್ತಿದ್ದೀಯೇ' ಎಂದು ನಿನ್ನನ್ನು ಎಚ್ಚರಿಸಿದರು.

ನೀನು ಎಂದಾದರೂ ಇತರರಿಗೆ ಅನ್ಯಾಯ ಮಾಡಿದಾಗ ಮಿತ್ರರು ನ್ಯಾಯದ ಮಾತನ್ನು ಹೇಳಿದರು. ಇತರರ ಮೇಲೆ ನೀನು ಎಂದಾದರೂ ಅತ್ಯಾಚಾರವೆಸಗಿದಲ್ಲಿ ಮಿತ್ರರು ನಿನಗೆ ಸತ್ಯಾಚರಣೆಯ ಪ್ರೇರಣೆಯನ್ನಿತ್ತರು. ಈ ರೀತಿಯಲ್ಲೆಲ್ಲ ಮಿತ್ರರು ಸದಾ ಕಾಲವೂ ನಿನ್ನ ಕಲ್ಯಾಣಕರ್ತರೆಂಬುದು ಸಿದ್ಧವಾಯಿತು.

ಆದರೆ, ನಾನೀಗ ನಿನ್ನನ್ನು ಎಚ್ಚರಿಸುತ್ತಿದ್ದೇನೆ. ನಿನ್ನ ಆ ಕಲ್ಯಾಣಕಾರೀ ಮಿತ್ರರೀಗ ಅಕಲ್ಯಾಣಕಾರಿಯಾಗಿರುವರು. ಇಂದು ಮಿತ್ರನಾಗಿದ್ದವನು ನಾಳೆ ಮೇಲಿಂದ ಮಿತ್ರನಾಗಿದ್ದು ಒಳಗಿಂದೊಳಗೇ ಶತ್ರುವಾಗಿಬಿಡುತ್ತಾನೆ. ಮತ್ತು ಇಂತಹ ಪ್ರಚ್ಛನ್ನ ಮಿತ್ರರು ಪ್ರಕಟ ಶತ್ರುಗಳಿಗಿಂತ ಹೆಚ್ಚು ಭಯಂಕರವಾಗಿರುತ್ತಾರೆ.

ಮೊದಲು ಮಿತ್ರರಾಗಿದ್ದವರು ಈಗಲೂ ಮಿತ್ರರಾಗಿರುವರೆಂದು ಬಹುಶಃ ನೀನು ತಿಳಿಯುತ್ತಿದ್ದು ಅವರ ಮೇಲೆ ನಂಬಿಕೆಯಿಟ್ಟಿರಬಹುದು. ಇಂದಿಗೂ ನೀನು ಅವರ ಸಲಹೆಯನ್ನು ಹಿತಕರವಾದ ಸಲಹೆಯೆಂದು ತಿಳಿದು ಅದಕ್ಕನುಸಾರ ನಡೆಯುತ್ತಿರಬಹುದು. ಅದುದರಿಂದಲೇ ನಾನು ನಿನ್ನನ್ನು ಎಚ್ಚರಿಸುತ್ತಿದ್ದೇನೆ. ಮೊದಲು ನೀನು ಕುಟಿಲ ವ್ಯವಹಾರ ಮಾಡುತ್ತಿದ್ದಾಗ ಮಿತ್ರರು ನಿನ್ನನ್ನು ಸರಳ ವ್ಯವಹಾರ ಮಾಡಲು ಪ್ರೇರಿಸುತ್ತಿದ್ದರು. ಆದರೆ, ಪರಿಸ್ಥಿತಿಯೀಗ ಬದಲಾಯಿಸಿದೆ. ನಿನ್ನನ್ನು ಸರಳ ವ್ಯವಹಾರದಲ್ಲಿ ಪ್ರವೃತ್ತನಾಗಿರುವುದನ್ನು ಕಂಡು ಆ ನಿನ್ನ ಮಿತ್ರರು ಮೇಲಿಂದ ಮಿತ್ರತೆಯ ವೇಷ ತೊಟ್ಟು ನಿನಗೆ ಕುಟಿಲ ಪರಾಮರ್ಶವನ್ನಿತ್ತು ಹಾನಿಯನ್ನು ತಂದೊಡ್ಡಲೆಳಸುತ್ತಿದ್ದಾರೆ. ಬೇರೆಯವರ ಮೂಲಕ ಅಲ್ಲ, ತಾವಾಗಿಯೇ ಪ್ರಕಟವಾಗಿ ನಿನ್ನನ್ನು ದುರ್ಮಾರ್ಗ ಪ್ರವೃತ್ತನಾಗಲು ಪ್ರೇರೇಪಿಸುವಷ್ಟು ನಿರ್ಲಜ್ಜರಾಗಿರುವರು ಆ ನಿನ್ನ ಮಿತ್ರರು.

ಪ್ರಾತಃ ಸಾಯಂಕಾಲ ಸಂಧ್ಯಾ ವಂದನೆಗೆ ಕುಳಿತಿರುವುದನ್ನು ನೋಡಿ ಅವರು ನಿನ್ನನ್ನು ಗೇಲಿಯೆಬ್ಬಿಸುತ್ತಾರೆ. 'ಭಗವಂತ ಇವನಿಗೇ ಸಿಗುವನು, ಇವನ ಮಾತನ್ನೇ ಆಲಿಸುವನು' ಎನ್ನುತ್ತಾರೆ. ನಿಯಮಪೂರ್ವಕ ಅಗ್ನಿಹೋತ್ರ ಮಾಡುವುದನ್ನು ನೋಡಿ 'ಬೆಂಕಿಯಲ್ಲಿ ಸುಡುವಷ್ಟು ತುಪ್ಪವನ್ನು ಹೊಟ್ಟೆಗೆ ಸಮರ್ಪಿಸು, ಇಲ್ಲವೇ ಯಾರಾದರೂ ಬಡವನಿಗೆ ತಿನ್ನಲು ಕೊಟ್ಟು ಸದುಪಯೋಗಗೊಳಿಸು' ಎನ್ನುವರು. ನಿನ್ನನ್ನು ಸತ್ಯಪರಾಯಣನಾಗಿರುವುದನ್ನು ನೋಡಿ 'ಈಗ ಸತ್ಯಹರಿಶ್ಚಂದ್ರನೋ, ಯುಧಿಷ್ಠಿರನೋ ಅವತಾರ ತಾಳಿ ಬಂದಿರುವನೆಂದು ಕುಚೋದ್ಯ ಮಾಡುತ್ತಾರೆ. ಸಂಯಮದ ಜೀವನ ನಡೆಸುವುದನ್ನು ಕಂಡು 'ನದಿಯ ಪ್ರವಾಹವನ್ನು ತಡೆಯುವ ಪ್ರಯತ್ನದಂತೆ ಪ್ರಾಕೃತಿಕ ವೇಗವನ್ನು ತಡೆಯುವುದು ಮೂರ್ಖತನ'ವೆನ್ನುತ್ತಾರೆ. ಸರಳ ಮತ್ತು ಅಪರಿಗ್ರಹ ಜೀವನವನ್ನು ನಡೆಸುವುದನ್ನು ಕಂಡು ಅವರು 'ಈ ಜೀವನವಂತೂ ತಿಂದುಂಡು ಮಜಾ ಮಾಡಲಿಕ್ಕಾಗಿದೆ'ಯೆನ್ನುತ್ತಾರೆ. ವೇದದ ಸ್ವಾಧ್ಯಾಯ ಮಾಡುತ್ತಿರುವುದನ್ನು ಕಂಡು 'ವೈದಿಕ ಭಾಷೆಯೀಗ ಮೃತಭಾಷೆಯಾಗಿದೆ, ಅದನ್ನೋದುವುದರಿಂದೇನು ಪ್ರಯೋಜನ?' ಎಂದು ವ್ಯಂಗ್ಯ ಮಾಡುತ್ತಾರೆ. ನೀನು ವ್ಯಾಯಾಮ ಮಾಡುವಾಗ 'ಇನ್ನು ಮನೆಯ ಬಾಗಿಲು ಅಗಲ ಮಾಡಬೇಕಾಗುವುದು' ಎಂಬ ಮಾತು ಕೇಳಿಬರುತ್ತದೆ.

ನೀನು ಆ ಕುಮಿತ್ರರ ವ್ಯಂಗ್ಯ ವಚನಗಳನ್ನೂ, ಕುಟಿಲ ಪರಾಮರ್ಶವನ್ನೂ ಹಿತ ಪರಾಮರ್ಶವೆಂದು ತಿಳಿದು ಸರಳ ಆಚರಣದಿಂದ ವಿಮುಖನಾಗುವುದಿಲ್ಲ ತಾನೆ? ಅದಕ್ಕಾಗಿ ವೇದದ ಮಾತುಗಳಲ್ಲಿಯೇ ನಿನ್ನನ್ನು ಎಚ್ಚರಿಸುತ್ತಿದ್ದೇನೆ— ಶಿವ-ಅಶಿವಗಳನ್ನು ತಿಳಿದುಕೊಳ್ಳು. ಯಾವ ಮಿತ್ರನೂ ಸದಾಕಾಲ ಮಿತ್ರನಾಗುವುದಿಲ್ಲ. ಯಾವ ಶತ್ರುವೂ ಸದಾಕಾಲ ಶತ್ರುವಾಗಿರುವುದಿಲ್ಲ. ಯಾರು ಮಿತ್ರರು, ಯಾರು ಶತ್ರುಗಳು; ಯಾವಾಗ ಯಾರು ಮಿತ್ರ ಅಥವಾ ಶತ್ರುವಾಗಿರುವನೆಂಬುದನ್ನು ನೀನು ಶಾಸ್ತ್ರಗಳ ಮಾರ್ಗದರ್ಶನದಿಂದಲೂ, ತನ್ನ ವಿವೇಕದಿಂದಲೂ ಅರಿತುಕೊಳ್ಳಬೇಕು. ಮಿತ್ರರನ್ನೂ ಅಮಿತ್ರರನ್ನೂ ಗುರುತಿಸಿ ಅವರೊಂದಿಗೆ ಯಥಾಯೋಗ್ಯನಾಗಿ ವ್ಯವಹರಿಸು.

ಇನ್ನೊಂದು ಮಾತನ್ನು ನಿನಗೆ ಹೇಳಬಯಸುತ್ತೇನೆ. ಹಲವು ಬಾರಿ ಸತ್ಪರಾಮರ್ಶವನ್ನೀಯುವವರೂ ಸಹ ನಿಜವಾದ ಮಿತ್ರರಾಗಿರುವುದಿಲ್ಲ. ತಮ್ಮ ಸ್ವಾರ್ಥ ಸಿದ್ಧವಾಗುವುದಾದಲ್ಲಿ ಅವರು ಕೆಲವು ವೇಳೆ ಹಿತವಚನವನ್ನಾಡುತ್ತಾರೆ. ಸ್ವಾರ್ಥಸಿದ್ಧಿಯಲ್ಲಿ ವಿಘ್ನ ಬಂದೊದಗಿದಾಗ ಕೂಡಲೇ ಅವರು ವಿರೋಧೀ ಒಳಸಂಚಿನಲ್ಲಿ ಸೇರಿಬಿಡುತ್ತಾರೆ. ನಾವು ನಮ್ಮ ಅತೀತದ ಸಿಂಹಾವಲೋಕನ ಮಾಡಿ ನೋಡಿದಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಇಂತಹ ಮಿತ್ರರು ಎಂದಾದರೂ ಬಂದಿರಬಹುದು. ಇಂತಹ ಅವಸರವಾದೀ ಮಿತ್ರರಿಂದ ನೀನು ಎಚ್ಚರಿಕೆ ವಹಿಸಬೇಕು. ಅಮಿತ್ರತೆಯ ಆಚರಣವನ್ನು ಮಾಡುವ ತಥಾಕಥಿತ ಮಿತ್ರರನ್ನು ನೀನು ನಿನ್ನ ಮಾರ್ಗದಿಂದ ದೂರ ಅಟ್ಟಿಬಿಟ್ಟಲ್ಲಿ ನಿನಗಾಗಿ ವಿಸ್ತೀರ್ಣ ಲೋಕದ ಮಾರ್ಗವು ತೆರೆದಿಡಲ್ಪಟ್ಟಿದೆ.

**ಅಪಾನುದೋ ಜನ ಮಮಿತ್ರ ಯಂತ।**
**ಮುರುಂ ದೇವೇ ಭ್ಯೋ ಅಕೃಣೋರು ಲೋಕಂ। [ಋಕ್ ೧೦–೧೮೦–೩॥]**

---

## ಭಾರತೀಯ ಇತಿಹಾಸ-ಪುನರ್ಲೇಖನ ಸಮಸ್ಯೆ

(ಡಾ. ಸತ್ಯಕೇತು ವಿದ್ಯಾಲಂಕಾರ, ಡಿ. ಲಿಟ್. ಮಸೂರಿ.)

(ಡಾ. ಸತ್ಯಕೇತು ವಿದ್ಯಾಲಂಕಾರ ಅವರು ಭಾರತದಲ್ಲಿ ಮಾತ್ರವಲ್ಲ, ಯೂರೋಪಿನಲ್ಲಿಯೂ ಖ್ಯಾತಿವೆತ್ತ ಇತಿಹಾಸಜ್ಞರಾಗಿದ್ದು ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಪ್ಯಾರಿಸ್ ವಿಶ್ವವಿದ್ಯಾನಿಲಯದಿಂದ ಡಿ. ಲಿಟ್ ಪದವಿ ಪಡೆದಿರುವರು, ಮಂಗಲಾಪ್ರಸಾದ ಪಾರಿತೋಷಕವನ್ನೂ ಸಹ ಪಡೆದಿರುವರಲ್ಲದೆ ಅನೇಕ ವರ್ಷಗಳ ತನಕ ಗುರುಕುಲ ಕಾಂಗಡಿ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದರು)

ಪಾಠಕರ ಮನಸ್ಸಿನಲ್ಲಿ ಸಾಂಪ್ರದಾಯಿಕ ಭಾವನೆ ಯೇಳದಂತಹ ಹಾಗೂ ಧರ್ಮನಿರಪೇಕ್ಷತೆಯ ಭಾವನೆ ವಿಕಸಿತವಾಗುವ ರೀತಿಯಲ್ಲಿ ಭಾರತೀಯ ಇತಿಹಾಸದ ಪುನಹ ಬರೆಯಬೇಕೆಂದು ಸಾಮಾನ್ಯವಾದ ಕೂಗೊಂದು ಕೇಳಿ ಬರುತ್ತಿದೆ. ಭಾರತ ಸರಕಾರವು ಈ ವಿಚಾರವನ್ನು ಎತ್ತಿಕೊಂಡು 1982–83ನೇ ಶಿಕ್ಷಣ ವರ್ಷದ ಮೊದಲೇ ಇತಿಹಾಸದ ಪಾಠ್ಯ ಪುಸ್ತಕಗಳನ್ನು ಪುನರೀಕ್ಷಿಸಿ ಅವುಗಳಲ್ಲಿ ಸಾಂಪ್ರದಾಯಿಕ ಪಕ್ಷಪಾತ ಮತ್ತು ವಿರೋಧವಿರದಂತೆ ನೋಡಿಕೊಳ್ಳಬೇಕೆಂದು ನಿರ್ಣಯಿಸಿದೆ. ಭಾರತೀಯ ವಿದ್ಯಾಲಯಗಳಲ್ಲಿ ಓದಿಸಲ್ಪಡುವ ಇತಿಹಾಸ ಪುಸ್ತಕಗಳಲ್ಲಿ ಸಂಶೋಧನೆಯು ಪರಮಾವಶ್ಯಕವೆಂಬುದನ್ನು ಯಾರೂ ಅಲ್ಲಗಳೆಯಲಾರರು. ಆದರೆ, ಆ ಸಂಶೋಧನೆಯನ್ನು ಯಾವುದಾದರೂ ಉದ್ದೇಶ್ಯವನ್ನೆದುರಿಗಿಟ್ಟು ಮಾಡಬೇಕೇ ಅಥವಾ ಘಟನೆಗಳ ಯಥಾರ್ಥ ರೂಪವನ್ನೆದುರಿಗಿಡಲು ಮಾಡಬೇಕೇ ಎಂಬ ಪ್ರಶ್ನೆಯೇಳುತ್ತದೆ.

ಹಿಂದೂ ಮುಸ್ಲಿಂ ಸಮಸ್ಯೆಯು ವಾಸ್ತವಿಕವಾಗಿದ್ದು ಅದರ ಸಮಾಧಾನಕ್ಕಾಗಿ ಎಲ್ಲಾ ಆಗತ್ಯವಾದ ಪ್ರಯತ್ನಗಳನ್ನೆಸಗಬೇಕು. ಆದರೆ, ಹಿಂದೂ ಮುಸ್ಲಿಂ ಐಕ್ಯ ಸಾಧನೆಗಾಗಿ ಭಾರತೀಯ ಇತಿಹಾಸದ ಮಧ್ಯಕಾಲವನ್ನು ಬರೆಯುತ್ತಾ 'ಔರಂಗಜೇಬನು ಹಿಂದೂ

ವಿರೋಧಿಯಾಗಿರಲಿಲ್ಲ. ತುರ್ಕ ಮತ್ತು ಅಫಗಾನ ಸುಲ್ತಾನರು ಹಿಂದೂ ಮಂದಿರಗಳನ್ನು ನಾಶಗೊಳಿಸಿಲ್ಲ, ಹಿಂದುಗಳೊಡನೆ ಅವರು ನಿಷ್ಪಕ್ಷ ಹಾಗೂ ನ್ಯಾಯೋಚಿತ ವ್ಯವಹಾರ ಮಾಡಿದ್ದರು" ಎಂದು ಹೇಳಬೇಕೆ? ಬಹುಶಃ ಯಾವ ಇತಿಹಾಸ ಲೇಖಕನೂ ಈ ರೀತಿ ಇತಿಹಾಸವನ್ನು ಸಂಶೋಧಿಸುವ ನೀತಿಯನ್ನು ಸಮರ್ಥಿಸಲಾರನು. ಇತಿಹಾಸವೊಂದು ದೀಪದಂತಿದೆ. ಅದು ಮೋಹ ಅಥವಾ ಪಕ್ಷಪಾತರೂಪವಾದ ಅಂಧಕಾರವನ್ನು ದೂರವಿರಿಸಿ ಪ್ರತಿಯೊಂದು ವಸ್ತುವನ್ನೂ ಅದರ ಯಥಾರ್ಥಸ್ಥಿತಿಯನ್ನೂ ಬಯಲುಗೊಳಿಸುತ್ತದೆಯೆಂದು ಇತಿಹಾಸದ ಲಕ್ಷಣವನ್ನು ಹೇಳುತ್ತಾ ಮಹಾಭಾರತದಲ್ಲಿ ಬರೆದಿರುವರು. ದೀಪದ ಬೆಳಕಿನಲ್ಲಿ ಕಪ್ಪು ವಸ್ತು ಕಪ್ಪಾಗಿಯೂ, ಬಿಳೀವಸ್ತು ಬಿಳುಪಾಗಿಯೂ ಕಾಣಿಸುತ್ತದೆ. ಅದೆಂದಿಗೂ ಯಾರ ಮೇಲೆಯೂ ಪಕ್ಷಪಾತ ಮಾಡುವುದಿಲ್ಲ. ಅದೇ ಕಾರ್ಯವನ್ನು ಇತಿಹಾಸ ಮಾಡುತ್ತದೆ. ಪ್ರತಿಯೊಂದು ಘಟನೆಯನ್ನು ಅದರ ಯಥಾರ್ಥ ರೂಪದಲ್ಲಿ ಜನರ ಮುಂದಿಡುವುದೇ ಅದರ ಉದ್ದೇಶ್ಯವಾಗಿದ್ದು, ಅದರ ಲಾಭವೇ ಇದೇ ಆಗಿದೆ. ಸಮ್ರಾಟ್ ಅಕ್ಬರನು ತನ್ನ ಶಾಸನದಲ್ಲಿ ಒಂದು ರಾಷ್ಟ್ರೀಯ ನೀತಿಯನ್ನು ಅನುಸರಿಸಿದ್ದು ಹಿಂದೂ ಮುಸ್ಲಿಮ ಪ್ರಜೆಗಳು ಅವನ ದೃಷ್ಟಿಯಲ್ಲಿ ಸಮಾನರಾಗಿದ್ದರು. ಅಧರ ಪರಿಣಾಮವಾಗಿಯೇ ಆತನು ಮುಗಲ ವಂಶದ ಶಾಸನವನ್ನು ವ್ಯವಸ್ಥಿತವೂ, ದೃಢವೂ ಮಾಡಲು ಸಮರ್ಥನಾದನು. ಜಹಾಂಗೀರನೂ, ಶಾಹಜಹಾನನೂ ಸಾಧಾರಣವಾಗಿ ಅಕ್ಬರನ ನೀತಿಯನ್ನನುಸರಿಸಿದ್ದರಿಂದ ಮುಗಲ ಶಾಸನವು ಒಂದು ಶತಮಾನಕ್ಕಿಂತಲೂ ಹೆಚ್ಚುಕಾಲ ಅಚ್ಚಳಿಯದೆ ತಳವೂರಿತು. ಆದರೆ, ಔರಂಗಜೇಬನು ಅಕ್ಬರನ ರಾಷ್ಟ್ರೀಯ ನೀತಿಯನ್ನು ಮೂಲೆಗೊತ್ತಿ ಭಾರತದಲ್ಲಿ ಸಂಕೀರ್ಣ ಸಾಂಪ್ರದಾಯಿಕ ನೀತಿಯನ್ನನುಸರಿಸತೊಡಗಿದಾಗಲೇ ಅವನಿಗೆ ವಿರುದ್ಧ ಬಂಡಾಯವೆದ್ದು ಮುಗಲ ಸಾಮ್ರಾಜ್ಯ ನುಚ್ಚುನೂರಾಗತೊಡಗಿತು. ಮರಾಠರು, ರಾಜಪೂತರು, ಸಿಕ್ಖರು ಮೊದಲಾದವರು ಅವನಿಗೆ ವಿರುದ್ಧ ಎದ್ದುನಿಂತರು. ಅಕ್ಬರನು ಪ್ರಯತ್ನಪಟ್ಟು ಸ್ಥಾಪಿಸಿದ ಸಫಲ ಭಾರತೀಯ ರಾಜನೀತಿಕ ಏಕತೆ ನಾಶವಾಗತೊಡಗಿತು. ಇದೊಂದು ಐತಿಹಾಸಿಕ ತಥ್ಯವಾಗಿದ್ದು ಇದನ್ನು ಯಥಾರ್ಥರೂಪದಲ್ಲಿಯೇ ಜನತೆಯ ಮುಂದಿಡುವುದು ಪರಮಾವಶ್ಯಕ.

ಭಾರತಕ್ಕೆ ಸಾಂಪ್ರದಾಯಿಕ ನೀತಿ ಉಪಯುಕ್ತವಾಗಿದೆಯೆ, ಅಥವಾ ರಾಷ್ಟ್ರೀಯ ನೀತಿಯೆ—ಎಂಬುದು ಪಾಠಕರಿಗೂ, ವಿದ್ಯಾರ್ಥಿಗಳಿಗೂ ಇದರಿಂದ ಮನವರಿಕೆಯಾಗಿದ್ದಿರಬಹುದು. ಧರ್ಮನಿರಪೇಕ್ಷತೆಯ ಭಾವನೆ ವಿಕಸಿತವಾಗಲೂ ಸಹ ಇದರಿಂದ ಸಹಾಯವೇ ಒದಗುವುದು. ಸಾಮಾನ್ಯವಾಗಿ ಜಗತ್ತಿನ ಎಲ್ಲ ದೇಶಗಳಲ್ಲಿ ಮಧ್ಯ ಕಾಲವನ್ನು ಅಂಧಕಾರ ಯುಗವೆಂದು ಹೇಳುತ್ತಾರೆ. ಆ ಕಾಲದಲ್ಲಿ ಯೂರೋಪಿನ ಎಲ್ಲಾ ದೇಶಗಳಲ್ಲಿಯೂ ಸ್ವೇಚ್ಛಾಚಾರೀ ಏಕತಂತ್ರ ರಾಜರ ಶಾಸನವಿದ್ದು ಸಾಂಪ್ರದಾಯಿಕ ವಿದ್ವೇಷವು ಉಗ್ರರೂಪವನ್ನು ತಾಳಿಕೊಂಡಿತ್ತು.

ಮಧ್ಯಕಾಲದಲ್ಲಿ ಯೂರೋಪಿನ ಕ್ರೈಸ್ತರು ರೋಮನ್ ಕ್ಯಾಥಲಿಕ್ ಮತ್ತು ಪ್ರೊಟೆಸ್ಟೆಂಟ್ ಎಂಬ ಎರಡು ಸಂಪ್ರದಾಯಗಳಲ್ಲಿ ಹಂಚಿಹೋಗಿದ್ದರು. ಕ್ಯಾಥಲಿಕ್ ರಾಜನು ಪ್ರೊಟೆಸ್ಟೆಂಟ್ ಪ್ರಜೆಗಳ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದನು. ಪ್ರೊಟೆಸ್ಟೆಂಟ್ ರಾಜನು ಕ್ಯಾಥಲಿಕ್ ಪ್ರಜೆಗಳನ್ನು ಸಮೂಲ ನಾಶಮಾಡ ಬಯಸುತ್ತಿದ್ದನು. ಸಮ್ರಾಟ್ ಚಾರ್ಲಸ್

ಪಂಚಮನು ತನ್ನ ವಿಶಾಲ ಸಾಮ್ರಾಜ್ಯಾಂತರ್ಗತವಾದ ನೆದರ್ಲೆಂಡ್‌ದಂತಹ ಚಿಕ್ಕ ರಾಜ್ಯದ ಐವತ್ತು ಸಾವಿರ ನರನಾರಿಯರನ್ನು ಪ್ರೊಟೆಸ್ಟೆಂಟರಾಗಿದ್ದು ತಮ್ಮ ಮತಪರಿವರ್ತನೆ ಮಾಡಲು ಸಿದ್ಧರಾಗದಿರುವುದರಿಂದ ಬೆಂಕಿಯಲ್ಲಿ ಸುಟ್ಟು ಸಾಯಿಸಿದನು. ಇಂತಹ ಅನೇಕ ಉದಾಹರಣೆಗಳು ನಮಗೆ ಯೂರೋಪಿನ ಇತಿಹಾಸದಲ್ಲಿ ದೊರೆಯುತ್ತವೆ. ಇಂದಿಗೂ ಯೂರೋಪಿನ ಕ್ಯಾಥಲಿಕ್ ಮತ್ತು ಪ್ರೊಟೆಸ್ಟೆಂಟರ ವಿರೋಧವು ಪೂರ್ಣವಾಗಿ ಅಳಿದು ಹೋಗಿಲ್ಲ. ಆದರೂ ಆ ದೇಶದ ಯಾವ ವಿಚಾರಕನೂ ಸಹ ಇತಿಹಾಸದ ಪುಸ್ತಕಗಳಿಂದ ಆ ಅಂಶವನ್ನು ತೆಗೆದುಹಾಕಬೇಕೆಂದು ಹೇಳುತ್ತಿಲ್ಲ. ನಿಜವಾಗಿ ಹೇಳಬೇಕಾದರೆ, ಇಂತಹ ಅಂಶಗಳು ಸಾಂಪ್ರದಾಯಿಕ ವೈಮನಸ್ಯವನ್ನು ದೂರಪಡಿಸಲು ಸಹಾಯಕವೇ ಆಗಿವೆ. ಯಾವುದೇ ಸಮಯದಲ್ಲಿ ಸಾಂಪ್ರದಾಯಿಕ ಭೇದ ಭಾವಗಳು ಯಾವ ರೀತಿ ಪ್ರಬಲಿಸಿದ್ದವು ಮತ್ತು ಅವುಗಳ ಪರಿಣಾಮವೇನಾಯಿತೆಂಬುದು ಅದರಿಂದ ಸ್ಪಷ್ಟವಾಗುತ್ತದೆ. ಕಳೆದು ಹೋದ ಘಟನೆಗಳ ಮೂಲಕ ಪಾಠ ಕಲಿಯುವುದು ಮಾನವ ಸಮಾಜದ ಉನ್ನತಿಗಾಗಿ ಅನಿವಾರ್ಯವಾಗಿದೆ. ಹಿಂದೆ ಮಾಡಿದ ತಪ್ಪುಗಳ ಮೇಲೆ ಪರದೆಯನ್ನೆಳೆಯದೆ ಅವುಗಳನ್ನು ಯಥಾರ್ಥವಾಗಿ ನಿರೂಪಿಸಿ ಭವಿಷ್ಯದಲ್ಲಿ ಅವುಗಳಿಂದ ಪಾರಾಗಲು ಪ್ರಯತ್ನಪಡಬೇಕು.

## ಸಂಶೋಧಿಸಲ್ಪಡಬೇಕಾದ ವಿಷಯಗಳು

ಹಲವು ವಿಷಯಗಳ ಸಂಶೋಧನೆಯಾಗಬೇಕಾಗಿದೆ. ಇತಿಹಾಸದ ಅನೇಕ ಪುಸ್ತಕಗಳಲ್ಲಿ ಇತಿಹಾಸವನ್ನು ಹಿಂದೂಕಾಲ, ಬೌದ್ಧಕಾಲ, ಮುಸ್ಲಿಂ ಕಾಲ ಎಂದು ಬೇರೆ ಬೇರೆ ಕಾಲಗಳಲ್ಲಿ ವಿಂಗಡಿಸಿರುವರು. ಇದರಿಂದ ಬೌದ್ಧ ಧರ್ಮದ ಅಥವಾ ಇಸ್ಲಾಂ ಧರ್ಮದ ಪ್ರಾಬಲ್ಯ ಆ ಕಾಲದಲ್ಲಿತ್ತೆಂಬ ಅರ್ಥವಾಗುತ್ತದೆ. ಈ ಮಾತು ಯಥಾರ್ಥವಾಗಿಲ್ಲ. ಬೌದ್ಧ ಕಾಲವೆಂದು ಎಣಿಸುವ ಕಾಲದಲ್ಲಿ ಭಾರತದ ಬಹುಸಂಖ್ಯ ಜನರು ಬೌದ್ಧರಾಗಿರಲಿಲ್ಲ. ಬಹುಸಂಖ್ಯ ರಾಜ್ಯಗಳನ್ನು ಬೌದ್ಧರಾಜರೂ ಆಳುತ್ತಲೂ ಇರಲಿಲ್ಲ. ಮಗಧದ ಬಾರ್ಹದ್ರಥ, ಶೈಶುನಾಗ, ನಂದ ಮತ್ತು ಮೌರ್ಯ ವಂಶದ ರಾಜರುಗಳಲ್ಲಿಯೂ ಹೆಚ್ಚುಮಂದಿ ಬೌದ್ಧ ಮತಾನುಯಾಯಿಗಳಾಗಿರಲಿಲ್ಲ. ಮಗಧವನ್ನು ಬಿಟ್ಟರೆ ಅನ್ಯ ರಾಜ್ಯಗಳಲ್ಲಿ ಭಾಗವತ ಧರ್ಮವೇ ಪ್ರಬಲವಾಗಿತ್ತು. ಮುಸ್ಲಿಂ ಕಾಲವನ್ನೇ ತೆಗೆದುಕೊಳ್ಳಿ, ಯಥಾರ್ಥವಾಗಿ ಹೇಳಬೇಕೆಂದರೆ ಯೂರೋಪಿನ ಮಧ್ಯಕಾಲದ ಇತಿಹಾಸದಂತೆ ಭಾರತದಲ್ಲಿಯೂ ಸಾಮಂತ ಪದ್ಧತಿ (Feudal System) ನೆಲೆಯೂರಿಕೊಂಡಿತ್ತು. ಅದರ ಪ್ರಕಾರ ಸಾಮಾನ್ಯ ಜನತೆಯ ಶಾಸನವಿರದೆ ಸಾಮಂತವರ್ಗವೇ ಆಳುತ್ತಿತ್ತು. ಆ ಸಾಮಂತವರ್ಗದಲ್ಲಿ ಹಿಂದೂ, ಮುಸ್ಲಿಮ್ ಎರಡೂ ಮತಗಳವರಿದ್ದರು. ಮುಗಲ ರಾಜವಂಶದ ಆಳಿಕೆಯ ಸಮಯದಲ್ಲಿ ಮುಸ್ಲಿಮ್ ಸಾಮಂತರಿಗಿಂತ ಹಿಂದೂ ಸಾಮಂತರು ಅತಿ ಹೆಚ್ಚಾಗಿದ್ದರು. ರಾಜಕೀಯ ನಿಜವಾದ ಪ್ರಯೋಗವು ಸಾಮಂತವರ್ಗದ ಕೈಯಲ್ಲಿದ್ದು ಅವರಲ್ಲಿ ರಾಜಪೂತ ಸಾಮಂತರ ಪ್ರಮುಖ ಸ್ಥಾನವನ್ನು ಆಕ್ರಮಿಸಿಕೊಂಡಿದ್ದರು. ಈ ಪರಿಸ್ಥಿತಿಯಲ್ಲಿ ಮುಗಲ ವಂಶದ ಶಾಸನಕಾಲವನ್ನು ಮುಸ್ಲಿಂ ಯುಗವೆಂದು ಕರೆಯುವುದು ಶುದ್ಧ ತಪ್ಪು. ಈ ಕಾಲದಲ್ಲಿ ಹಲವು ಮಂದಿ ಅಗಸರು, ನಾಪಿತರು, ದರ್ಜಿಗಳು, ನೇಕಾರರು, ಬೆಸ್ತರು ಮೊದಲಾದವರು ಇಸ್ಲಾಂ ಮತವನ್ನು ಅಂಗೀಕರಿಸಿದ್ದರಾದರೂ ರಾಜ್ಯಾಡಳಿತೆಯಲ್ಲಿ ಅವರ ಕೈಯೇನೂ ಇದ್ದಿಲ್ಲ. ಅದಲ್ಲದೆ ಇನ್ನೂ ಅನೇಕ ಜಾತಿಗಳು ಮುಸ್ಲಿಮರಾಗಿ ಜಮೀನುದಾರರ ಹೊಲಗಳನ್ನು ಉತ್ತು

ಬಿತ್ತಿ ತಮ್ಮ ಜೀವನ ನಡೆಸುತ್ತಿದ್ದು ಅವರ ಸ್ಥಿತಿಯೂ ಭೂಮಿಹೀನ ಹಿಂದುಗಳ ಸ್ಥಿತಿಯಂತೆಯೇ ಬಹು ದಯನೀಯವಾಗಿತ್ತು. ನಿಜವಾಗಿ ನೋಡಿದರೆ ಆಗ ಹಿಂದುಗಳದಾಗಲೀ, ಮುಸ್ಲಿಮರದಾಗಲೀ ಆಡಳಿತವಿರದೆ ತಮ್ಮ ಸ್ವಜಾತೀಯ ಯೋಧರನ್ನು ಸಂಗಡ ತೆಗೆದುಕೊಂಡು ತನಗಿಂತ ಬಲಿಷ್ಠರಾದ ಸಾಮಂತರ ಕಡೆಯಿಂದ ರಣಕ್ಷೇತ್ರದಲ್ಲಿಳಿಯಲು ಸದಾ ತತ್ಪರರಾಗುವ ಭೂಮಿಪತಿ ಸಾಮಂತರದ್ದಾಗಿತ್ತು. ಆ ಸೇವೆಯ ಬದಲಾಗಿಯೇ ಅವರ ಉಂಬಳಿ ಸಿಕ್ಕಿ ಸಾಮಂತತನವನ್ನು ಪಡೆಯುತ್ತಿದ್ದರು. ಭಾರತೀಯ ವಿದ್ಯಾರ್ಥಿಗಳೆದುರಿನಲ್ಲಿ ಈ ಯಥಾರ್ಥ ಸ್ಥಿತಿ ಸ್ಪಷ್ಟವಾಗುವಂತೆ ಹಾಗೂ ಭಾರತದಲ್ಲಿ ಕೆಲವು ಶತಮಾನಗಳ ವರೆಗೆ ಮುಸ್ಲಿಮರು ಆಡಳಿತ ನಡೆಸಿದರೆಂದೂ ಹಿಂದುಗಳು ಅವರ ಪ್ರಜೆಗಳಾಗಿದ್ದರೆಂದೂ ಮೂಡಿರುವ ಭ್ರಾಂತಿ ತೊಡೆದುಹೋಗುವಂತೆ ಭಾರತೀಯ ಇತಿಹಾಸವನ್ನು ಪುನಃ ಬರೆಯಬೇಕು.

## ಎರಡು ಸಾವಿರ ವರ್ಷಗಳ ಪರತಂತ್ರತೆ ಸುಳ್ಳು

ಹದಿನೆರಡನೆಯ ಶತಮಾನದ ಕೊನೆಯ ತನಕ ದಕ್ಷಿಣ ಪೂರ್ವಿಏಶ್ಯಾದ ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲಿ ಹಿಂದೂಧರ್ಮ ಮತ್ತು ಸಂಸ್ಕೃತಿಯ ಪ್ರಾಧಾನ್ಯವಿತ್ತು. ಅದಕ್ಕಿಂತ ಸ್ವಲ್ಪ ಹಿಂದಿನ ವರೆಗೆ ಅಫಗಾನಿಸ್ತಾನ, ಮಧ್ಯಏಶ್ಯಾ ಹಾಗೂ ಅದರ ಸಮೀಪದ ಇತರ ದೇಶಗಳಲ್ಲಿ ಭಾರತದಲ್ಲಿ ಆವಿರ್ಭವಿಸಿದ ಧರ್ಮಗಳು ಮುಖ್ಯವಾಗಿದ್ದು ಅವುಗಳ ಸಾಹಿತ್ಯವು ಸಂಸ್ಕೃತ ಭಾಷೆಯಲ್ಲಿತ್ತು ಎಂಬ ವಿಷಯವನ್ನು ಈ ಕಾಲದಲ್ಲಿ ಭಾರತೀಯ ಶಿಕ್ಷಣಾಲಯಗಳಲ್ಲಿ ಓದಿಸಲ್ಪಡುವ ಇತಿಹಾಸ ಪುಸ್ತಕಗಳಲ್ಲಿ ಚೆನ್ನಾಗಿ ಬೆಳಕು ಬೀರಿಲ್ಲ. ಹಿಂದುಗಳು ಎರಡು ಸಾವಿರ ವರ್ಷಗಳಿಂದ ಗುಲಾಮರಾಗಿದ್ದರೆಂದು ನುಡಿಯಲು ಯಾರು ಸಂಕೋಚಪಡುತ್ತಿಲ್ಲ. ಆದರೆ, ಈ ಮಾತು ಸತ್ಯಸ್ಥಿತಿಗೆ ತೀರಾ ವಿರುದ್ಧವಾದ ಮಾತಾಗಿದೆ. ಹದಿನೆರಡನೆಯ ಶತಮಾನದ ವರೆಗೆ ನಮ್ಮ ದೇಶದಲ್ಲಿ ಹಿಂದುಗಳೇ ಆಳಿಕೊಂಡಿದ್ದರು. ಮಾತ್ರವಲ್ಲ, ಭಾರತದ ಹೊರಗೂ ಎಷ್ಟೋ ದೇಶಗಳಲ್ಲಿ ಹಿಂದೂ ರಾಜವಂಶಗಳು ಆಡಳಿತೆ ನಡೆಸಿಕೊಂಡಿದ್ದವು. ಈ ಐತಿಹಾಸಿಕ ತಥ್ಯವನ್ನು ಪಾಠ್ಯಪುಸ್ತಕಗಳಲ್ಲಿ ಸೇರಿಸಬೇಕು. ಆದರಿಂದ ಭಾರತೀಯರ ಮನಸ್ಸಿನಲ್ಲಿ ತಮ್ಮ ಧರ್ಮ, ಸಂಸ್ಕೃತಿ ಮತ್ತು ಸಾಹಿತ್ಯದ ಮೇಲೆ ತಾತ್ಸಾರ ಭಾವನೆಯೇಳಲಾರದು ಮಾತ್ರವಲ್ಲ, ಅವರಿಗೆ ಐತಿಹಾಸಿಕ ದೃಷ್ಟಿಯಿಂದ ಪೂರ್ಣಸತ್ಯವಾದ ತಥ್ಯಗಳು ತಿಳಿದುಬರುವವು. ಹದಿನೆರಡನೆಯ ಶತಮಾನದ ಅನಂತರ ತುರ್ಕ-ಅಫಗಾನ ಆಕ್ರಾಂತರು ಈ ದೇಶದ ಬಹುಭಾಗದ ಮೇಲೆ ತಮ್ಮ ಆಡಳಿತವನ್ನು ಸ್ಥಾಪಿಸಿದರಾದರೂ ಆ ಆ ಕಾಲದಲ್ಲಿಯೇ ತುರ್ಕನರು ಮಂಗೋಲರು ಪಶ್ಚಿಮೀದೇಶಗಳನ್ನು ಆಕ್ರಮಿಸುವಾಗ ಮಧ್ಯ ಏಶ್ಯಾ, ಪರ್ಶಿಯಾ ಹಾಗೂ ಮುಸ್ಲಿಮ್ ಅರಬರು ಆಳುತ್ತಿದ್ದ ಪಶ್ಚಿಮ ಏಶ್ಯಾದ ಎಲ್ಲಾ ದೇಶಗಳನ್ನು ಪಾದಾಕ್ರಾಂತವಾಗಿ ಮಾಡಿದ್ದಾರೆಂಬುದನ್ನು ಮರೆಯಬಾರದು. ಭಾರದತಲ್ಲಿ ತುರ್ಕ-ಅಫಗಾನರ ಹಾಗೂ ಮಂಗೋಲರ ಆ ವಿಶ್ವವ್ಯಾಪೀ ಘಟನಾವಳಿಯ ಒಂದು ಅಂಶ ಮಾತ್ರವಾಗಿತ್ತು. ತುರ್ಕರೂ, ಮಂಗೋಲರೂ ಮುಸ್ಲಿಂ ಅರಬರನ್ನು ಸೋಲಿಸಲು ಸಮರ್ಥರಾದರು. ಇಸ್ಲಾಮಿನಲ್ಲಿ ಯಾವುದೋ ಮೌಲಿಕ ನಿರ್ಬಲತೆಯಿದ್ದುದರಿಂದಲೇ ಅವರು ವಿದೇಶೀಯರ ಹಾಗೂ ವಿಧರ್ಮಿ (ಅಷ್ಟರ ವರೆಗೆ ತುರ್ಕ-ಮಂಗೋಲರು ಇಸ್ಲಾಂ ಸ್ವೀಕರಿಸಿರಲಿಲ್ಲ) ಜಾತಿಗಳ ಕೈಯಲ್ಲಿ ಪರಾಸ್ತರಾದರು. ಹದಿಮೂರನೆಯ ಶತಮಾನದಲ್ಲಿ ಉತ್ತರ

ಭಾರತದ ಕೆಲವು ಹಿಂದೂ ರಾಜಪೂತ ರಾಜ್ಯಗಳೂ ಆ ಆಕ್ರಾಂತರ ಎದುರಿನಲ್ಲಿ ನಿಲ್ಲಲಾರದೆ ಹೋದಲ್ಲಿ ಹಿಂದೂಧರ್ಮ ಮತ್ತು ಸಂಸ್ಕೃತಿಯು ತನ್ನ ನಿರ್ಬಲತೆಯಿಂದಾಗಿಯೇ ಭಾರತವು ವಿದೇಶೀಯರ ಕೈಯಲ್ಲಿ ಯಾವಾಗಲೂ ಸೋಲುತ್ತ ಹೋಯಿತೆಂಬ ಪರಿಣಾಮಕ್ಕೆ ನಾವು ಹೇಗೆ ಮುಟ್ಟಬಲ್ಲೆವು? ಗ್ರೇಟ್ ಬ್ರಿಟನ್ ಕೂಡ ಮೊದಲು ರೋಮನರಿಂದಲೂ ಆಮೇಲೆ ನಾರ್ಮನರ ಮೂಲಕವೂ ಆಕ್ರಾಂತವಾಗಿತ್ತು. ಹಲವು ಶತಮಾನಗಳ ತನಕ ಅದು ವಿದೇಶೀಯರ ಆಡಳಿತೆಗೊಳಪಟ್ಟಿತ್ತು. ಇದೊಂದು ಇತಿಹಾಸದ ಸ್ವಾಭಾವಿಕ ಕ್ರಮವಾಗಿದ್ದು ಭಾರತದಲ್ಲಿಯೂ ವಿಧರ್ಮಿಯರ ಶಾಸನದ ಸಾಮಯಿಕ ಅಸ್ತಿತ್ವವನ್ನು ಸಹ ಇದೇ ಪರಿಪ್ರೇಕ್ಷ್ಯದಲ್ಲಿ ನೋಡಬೇಕಾಗಿದೆ,

## ಗೋಮಾಂಸದ ಅಸಂಬದ್ಧ ಮಾತು

ಪ್ರಾಚೀನ ಆರ್ಯರು ಗೋಮಾಂಸ ತಿನ್ನುತ್ತಿದ್ದರೆಂದು ಪ್ರತಿಪಾದಿಸುವ ಇತಿಹಾಸ ಪುಸ್ತಕಗಳನ್ನು ಕೆಲವು ಭಾರತೀಯ ಸ್ಕೂಲುಗಳಲ್ಲಿ ಓದಿಸುತ್ತಿದ್ದಾರೆ ಹಿಂದುಗಳು ಗೋವನ್ನು ಪವಿತ್ರವೆಂದು ತಿಳಿದು ಅದನ್ನು ಕೊಲ್ಲುವುದು ಮಹಾ ಪಾಪವೆಂದು ನಂಬುತ್ತಾರೆ. ಅವರ ಪೂರ್ವಜರು ಗೋಮಾಂಸ ಭಕ್ಷಕರೆನ್ನುವುದರಿಂದ ಅವರಿಗೆ ಆಘಾತವಾಗುತ್ತದೆ. ಪ್ರಾಚೀನ ಆರ್ಯರು ಗೋಮಾಂಸ ಭಕ್ಷಕರಾಗಿದ್ದರೆನ್ನುವ ಮಾತು ಎಷ್ಟು ಮಟ್ಟಿಗೆ ನಿಜವಾಗಿದೆಯೆನ್ನುವ ವಿವಾದದಲ್ಲಿ ಬೀಳುವ ಆವಶ್ಯಕತೆ ನಮಗಿಲ್ಲ. ಆದರೆ, ವಿದ್ಯಾಲಯಗಳ ಪಾಠ್ಯ ಪುಸ್ತಕಗಳಲ್ಲಿ ಇದನ್ನು ಬರೆಯುವುದು ಸರ್ವಥಾ ಅನುಚಿತ ಹಾಗೂ ಅಪ್ರಾಸಂಗಿಕವಾಗಿದೆ. ಇತಿಹಾಸದಲ್ಲಿ ಸಭ್ಯತಾ ಸಂಸ್ಕೃತಿಗಳ ವಿವಿಧ ಅಂಗಗಳ ವಿಕಾಸದ ಪ್ರಕ್ರಿಯೆಯ ಪ್ರತಿಪಾದನವಾಗುತ್ತದೆ. ಯಾವುದಾದರೂ ಜನಸಮೂಹವು ಭೋಜನದಲ್ಲಿ ಏನೇನು ತೆಗೆದುಕೊಳ್ಳುತ್ತದೆಂಬ ವಿಷಯವು ಅದರ ಸಾಂಸ್ಕೃತಿಕ ವಿಕಾಸದೊಂದಿಗೆ ಏನೂ ಸಂಬಂಧವಿಲ್ಲ. ಆದುದರಿಂದಲೇ ಇಂಗ್ಲೆಂಡ್, ಫ್ರಾನ್ಸ್ ಮೊದಲಾದ ದೇಶದ ಮಕ್ಕಳಿಗೆ ಓದಿಸಲ್ಪಡುವ ಇತಿಹಾಸದ ಪುಸ್ತಕಗಳಲ್ಲಿ ಆ ದೇಶದ ಪೂರ್ವಜರು ಯಾವ ಯಾವ ಖಾದ್ಯ ಪದಾರ್ಥವನ್ನೂ, ಮಾಂಸವನ್ನೂ ತಿನ್ನುತ್ತಿದ್ದರೆಂದು ಬರೆದಿರುವುದಿಲ್ಲ. ಅಂದಮೇಲೆ ಭಾರತೀಯ ವಿದ್ಯಾರ್ಥಿಗಳ ಪೂರ್ವಜರು ಗೋಮಾಂಸ ತಿನ್ನುತ್ತಿದ್ದರೋ ಅಥವಾ ಬೇರಾವುದಾದರೂ ಪ್ರಾಣಿಯ ಮಾಂಸವನ್ನು ತಿನ್ನುತ್ತಿದ್ದರೋ ಎಂದು ಬರೆಯುವ ಅಗತ್ಯವೇಕಾಯಿತು? ಈ ರೀತಿಯ ಸಂದರ್ಭಗಳನ್ನು ಸಹ ಇತಿಹಾಸ ಪುಸ್ತಕಗಳಿಂದ ತೆಗೆದುಹಾಕಬೇಕು.

ಇತಿಹಾಸ ಪುಸ್ತಕಗಳ ಪುನರ್ಲೇಖನ ಹಾಗೂ ಸಂಶೋಧನ ವಿಷಯಕವಾದ ಭಾರತ ಸರಕಾರದ ನಿರ್ಣಯವು ಯುಕ್ತವೂ, ಪ್ರಶಂಸನೀಯವೂ ಆಗಿದೆ. ಮಾತ್ರ, ಈ ಕಾರ್ಯವನ್ನು ನಿಷ್ಪಕ್ಷರಾಗಿ ವಿಶುದ್ಧ ಇತಿಹಾಸಿಕ ದೃಷ್ಟಿಯಿಂದ ತಥ್ಯಗಳನ್ನು ಯಥಾರ್ಥ ರೂಪದಲ್ಲಿ ಮುಂದಿಡಲು ಸಮರ್ಥರಾದ ವಿದ್ವಾಂಸರಿಂದ ಮಾಡಿಸಬೇಕೇ ಹೊರತು, ತಮ್ಮ ಮಂತವ್ಯಗಳನ್ನು ಪ್ರಚಾರಪಡಿಸುವ ಅಥವಾ ತಮ್ಮ ವಿಶಿಷ್ಟವಾದ ಲಕ್ಷ್ಯಗಳನ್ನು ಪೂರೈಸುವ ಸಾಧನವನ್ನಾಗಿ ಮಾಡುವ ಲೇಖಕರ ಮೂಲಕ ಅಲ್ಲ. ●

# ಪಾಲ್ಕೆ ಜುವೆಲ್ಲರ್ಸ್

**ಚಿನ್ನ, ಬೆಳ್ಳಿ ಮತ್ತು ವಜ್ರ ವ್ಯಾಪಾರಿಗಳು**

**ಶಾಪ್ ನಂಬ್ರ 21, ಗ್ರೌಂಡ್ ಫ್ಲೋರ್, ಈಸ್ಟರ್ನ ಬ್ಲಾಕ್**

**ಜಯನಗರ ಕಾಂಪ್ಲೆಕ್ಸ್, ಬೆಂಗಳೂರು-560011.**



Necklace Designed & Manufactured by

## Palke Jewellers

**Shop No. 21, Ground floor,**
**Eastern Block, Jayanagar Complex,**
**BANGALORE-560011.**

*Manufacturers of* :

Gold Jewels & Silver Wares

Dealers in Diamond & Precious Stones.

# ನಗು ನಗುತಾ ನಲೀ ನಲೀ.........

● ಪ್ರೊ|| ಸುರೇಶಚಂದ್ರ ವೇದಾಲಂಕಾರ.

ಜೀವನವು ಸಂಘರ್ಷದ ಇನ್ನೊಂದು ಹೆಸರೆಂದು ಹೇಳುತ್ತಾರೆ. ಇದೂ ಸಹ ವಿಚಿತ್ರವಾದ ಮಾತು. ಜೀವನವು ಸಂಘರ್ಷವೆಂದಾದರೆ ಜೀವನವಿಡೀ ನಾವು ವ್ಯಾಕುಲತೆ, ಪ್ರಕ್ಷುಬ್ಧತೆಯಿಂದಲೇ ಇರಬೇಕೆ? ಜೀವನದ ಮಾಧುರ್ಯವನ್ನು ನಾವು ನಗು ನಗುತ್ತಾ ಸ್ವೀಕರಿಸುವುದಾದರೆ, ಮುಗುಳ್ನಗುತ್ತಾ ಪ್ರಫುಲ್ಲಿತರಾಗುವುದಾದರೆ, ಜೀವನದ ಪ್ರಕ್ಷುಬ್ಧತೆಯನ್ನೂ ಸಹ ಪ್ರಸನ್ನತೆಯಿಂದ ಮತ್ತು ಶಾಂತಿಯಿಂದ ಏಕೆ ಸಹಿಸಬಾರದು? ಸುಖ ಮತ್ತು ದುಃಖಗಳೆರಡೂ ಜೀವನವನ್ನು ಸಮತೋಲನದಲ್ಲಿ ಇಡುತ್ತವೆ. ಹೀಗಿರುವಾಗ ದುಃಖ ಬಂದಾಗ ಅಳುವುದರಿಂದೇನು ಫಲ? ಕವಿಯೊಬ್ಬರ ಶಬ್ದಗಳಲ್ಲಿ ಹೇಳುವುದಾದರೆ:—

**ಮೃತ್ಯುವಿನಲಿ, ದುಃಖ-ಕ್ಲೇಶಗಳಲಿ ಹಾಡಬಲ್ಲವನೇ ಗಾಯಕ।**
**ಕಾಲದ ಗಿರಿ ಗಹ್ವರದಲಿ ನುಸುಳುವ ಜಲವದೆ ಪಾವಕ ||**

ರಾಜಮಾರ್ಗದಲ್ಲಿ, ಎಲ್ಲಾ ಸುಖ-ಸೌಲಭ್ಯಗಳೊಂದಿಗೆ ಹೋಗುವ ಯಾತ್ರಿಕನ ಯಾತ್ರೆ ಒಂದು ಹೆಚ್ಚಿನದಲ್ಲ. ಮಾರ್ಗದಲ್ಲಿ ಎದುರಾಗುವ ನೂರೆಂಟು ವಿಘ್ನಗಳನ್ನು ಲೀಲಾಜಾಲವಾಗಿ ಎದುರಿಸುತ್ತಾ ತನ್ನ ಗುರಿಯತ್ತ ನಿರಂತರ ಸಾಗುವ ಯಾತ್ರಿಕನೇ ಅಭಿನಂದನೀಯ; ಧೀರ. ಕೆಲವು ಜನರಲ್ಲಿ ಅದ್ಭುತ ಮಹತ್ವಾಕಾಂಕ್ಷೆ ಇರುತ್ತದೆ. ಅವರೆಂದಿಗೂ ಆಯಾಸಗೊಳ್ಳುವ, ಅಥವಾ ಸೋಲನ್ನೊಪ್ಪುವ ಪ್ರಶ್ನೆಯೇ ಇಲ್ಲ. ಆರ್ಯ ಸಮಾಜದ ಸುಪ್ರಸಿದ್ಧ ನಾಯಕರೂ, ಗುರುಕುಲ ಜ್ವಾಲಾಪುರದ ಆಚಾರ್ಯರೂ ಆಗಿದ್ದ ಸ್ವರ್ಗೀಯ ನರದೇವ ಶಾಸ್ತ್ರೀ ತಮ್ಮ ಜೀವನದ ಅಮೂಲ್ಯ ಅನುಭವ ಹೇಳುತ್ತಾ ಇದ್ದರು. ಅವರ ಮಾತಿನಲ್ಲೇ ಆಲಿಸೋಣ:—

"ಜೀವನದಲ್ಲಿ ಸಫಲತೆಗಾಗಿ ಮನುಷ್ಯನು ಗರ್ವವನ್ನು ಕಿತ್ತೆಸೆಯಬೇಕು. ತನ್ನ ಜೀವನವು ಜನರಿಗೆ ಲಾಭದಾಯಕವೂ, ಪ್ರೇಮದಿಂದ ಪರಿಪೂರ್ಣವೂ ಆಗುವಂತೆ ಪ್ರಯತ್ನಿಸುವುದು ಸಫಲತೆಯ ಮೊದಲ ಹೆಜ್ಜೆ. ಮನಸ್ಸು ಶಾಂತವಾಗಿರಲಿ; ಮುಖ ಪ್ರಸನ್ನವಾಗಿರಲಿ; ಎಲ್ಲಾ ಕಾರ್ಯಗಳೂ ಉರಿಯುವ ಜ್ವಾಲೆಯಂತೆ ನಿರಂತರವಾಗಿ ನಡೆಯುತ್ತಿರಲಿ. ಸಫಲತೆ ನಿಮ್ಮ ಪಾದದ ಬಳಿ ಬಂದು ಬೀಳುತ್ತದೆ. ನಿಮ್ಮ ದುಃಖಗಳನ್ನೂ, ಚಿಂತೆಗಳನ್ನೂ, ನಿರಾಶೆಗಳನ್ನೂ ಬೇರೆಯವರ ಹತ್ತಿರ ಹೇಳಿಕೊಳ್ಳುತ್ತಾ ಇರಬೇಡಿ. ಸದಾ ನಗುಮುಖದಿಂದಿರುವುದು ಆರೋಗ್ಯವಂತನಾಗಿರುವುದರ ಚಿಹ್ನೆ ಹಾಗೂ ಧರ್ಮಾಚರಣೆ ಅಥವಾ ಆಧ್ಯಾತ್ಮಿಕತೆಯ ಚಿಹ್ನೆ. ನಿಮ್ಮ ಎಲ್ಲಾ ಚಿಂತೆಗಳನ್ನೂ ಗಾಳಿಯಲ್ಲಿ ತೇಲಿಬಿಡಿ. ನಿಮ್ಮ ವ್ಯಾಕುಲತೆಗಳ, ಪ್ರಕ್ಷುಬ್ಧತೆಯ ರೊಟ್ಟಿಗಳನ್ನು ನಾಯಿಗಳಿಗೆ ಆಹಾರವನ್ನಾಗಿಸಿಬಿಡಿ. ಚಿಂತೆ, ಗಾಬರಿ, ಕ್ರೋಧ, ಆತುರ, ಉದ್ವೇಗಪೂರ್ಣ ವಾರ್ತಾಲಾಪ ವಿಷಕ್ಕೆ ಸಮಾನವಾದುದು. ಪ್ರಸನ್ನತೆ, ಮಧುರತೆ ಮತ್ತು ಗಾಢನಿದ್ರೆ ಜೀವನದ ಸಫಲತೆಯ ರಹಸ್ಯ. ಯಾರು ಹರ್ಷಚಿತ್ತರಾಗಿರುವರೋ ಅವರು ಉತ್ತಮವಾಗಿ ಕಾರ್ಯವೆಸಗಬಲ್ಲರು. ಪ್ರಸನ್ನತೆಯ ಶಕ್ತಿ ಅಪಾರವಾದುದು. ನಿಮ್ಮ ಪ್ರತಿಯೊಂದು ಮುಗುಳ್ನಗೆ ನಿಮ್ಮ ಜೀವನದ ಜ್ಯೋತಿಯಾಗಿ

ಬೆಳಗಬಲ್ಲುದು. ಮನುಷ್ಯನು ಜೀವನದ ಸಂಘರ್ಷಗಳೊಡನೆ ಹೋರಾಡುತ್ತಿಲ್ಲ. ಜೀವನ ವೊಂದು ಒಂದು ಮಧುರ ಗೀತೆಯಾಗಿದೆ; ನೋವಿನ ಕಥೆಯಲ್ಲ. ಜೀವನವು ವಿಜಯವೇ ವೊರತು ಪರಾಜಯವಲ್ಲ."

ವ್ಯಕ್ತಿತ್ವವನ್ನು ಆಕರ್ಷಕವನ್ನಾಗಿಸಿಕೊಳ್ಳಲು ಪ್ರಸನ್ನತೆ ಒಂದು ಉತ್ತಮ ಟಾನಿಕ್. ಇದು ತನಗೆ ಮಾತ್ರವಲ್ಲದೆ, ಇತರರಿಗೂ ಲಾಭದಾಯಕವಾಗಬಲ್ಲದು. ನಿರಾಶರೂ, ಹರಳೆಣ್ಣೆ ಮುಖದವರೂ, ಸೋತ ಮುಖದವರೂ ಆದವರು ಈ ಟಾನಿಕನ್ನು ಒಂದೆರಡು ಚಮಚೆಯಲ್ಲ, ಬಹಳಷ್ಟು ಕುಡಿಯಬೇಕು. ಪ್ರತಿಯೊಬ್ಬರಿಗೂ ಪ್ರತಿಯೊಂದು ಸಮಯದಲ್ಲೂ ಮುಗುಳ್ನಗೆಯ ಉಡುಗೆಯನ್ನು ನೀಡಿರಿ. ಅದು ಇಂದ್ರಜಾಲದಂತೆ ಕೆಲಸ ಮಾಡುತ್ತದೆ. ಇದು ನೀಡಿದಷ್ಟೂ ಕಡಿಮೆಯಾಗದ ನಿಧಿ. ಕೇವಲ ಮುಗುಳ್ನಗೆಯನ್ನೇ ತನ್ನ ಪ್ರಮುಖ ಬಂಡವಾಳ ಮಾಡಿಕೊಂಡು ಅಭಿವೃದ್ಧಿಯನ್ನು ಪಡೆದಿರುವ ವ್ಯಾಪಾರಿಯೊಬ್ಬನ ಪರಿಚಯ ನನಗಿದೆ.

ನನ್ನ ಓರ್ವ ಮಿತ್ರನಿದ್ದಾನೆ. ಆತನನ್ನು ಭೇಟಿ ಮಾಡಿದಾಗಲೆಲ್ಲಾ ವ್ಯಾಕುಲತೆಯೇ ಮೈವೆತ್ತವನಂತಿರುತ್ತಾನೆ. ಮನೆಯಲ್ಲಿ ಸಂತೋಷವಿಲ್ಲ; ಹೊರಗೆ ಹೋದಾಗ ಮನೆಯ ಚಿಂತೆ. ಹೀಗೆ ಚಿಂತಾಸಮುದ್ರದಲ್ಲಿ ಮುಳುಗಿರುತ್ತಾನೆ. ಒಮ್ಮೆ ಹೆಂಡತಿಯ ಆರೋಗ್ಯದ ಬಗೆಗೆ ಚಿಂತೆಯಾದರೆ, ಇನ್ನೊಮ್ಮೆ ಮಕ್ಕಳ ಓದಿನ ಬಗ್ಗೆ. ಕಷ್ಟಪಟ್ಟು ಹೆಂಡತಿಗೆ ಔಷಧ ಮಾಡಿಸಿದರೆ, ಚಿಕ್ಕಮಗುವಿಗೊಂದು ಕಾಹಿಲೆ ಪ್ರಾರಂಭವಾಗುತ್ತದೆ. ಅದಕ್ಕೂ ಗುಣವಾದರೆ ಮತ್ತೊಂದು ಹುಡುಗನಿಗೆ, ಹೀಗೆ ಕೊನೆಯೇ ಇಲ್ಲದ ಚಿಂತೆಗಳು.

ನನ್ನ ಕಾಲೇಜಿನಲ್ಲೊಬ್ಬ ಸಹೋದ್ಯೋಗಿ ಪ್ರಾಧ್ಯಾಪಕರಿದ್ದಾರೆ. ಅವರು ಯಾವಾಗಲೂ ತಮ್ಮ ಕಷ್ಟಗಳ ಬಗೆಗೇ ಹೇಳಿಕೊಳ್ಳುತ್ತಿರುತ್ತಾರಲ್ಲದೆ, ಸದಾ ಶೋಕಾಕುಲರಾಗಿರುತ್ತಾರೆ. ವಿಷಯವೇನೆಂದು ಕೇಳಿದೊಡನೆಯೇ ಅವರ ಪ್ರಕ್ಷುಬ್ಧತೆ ಮತ್ತಷ್ಟು ಹೆಚ್ಚಾಗುತ್ತದೆ. ತುಂಬಾ ಶೋಕಾಕುಲರಾಗಿ, ತಮ್ಮ ಮನೆಯ ಕಷ್ಟಗಳನ್ನು ಒಂದೇ ಉಸಿರಿನಲ್ಲಿ ಹೇಳಿಬಿಡುತ್ತಾರೆ.

ಮನೆಯಲ್ಲಿ ನಿಮ್ಮ ಹೆಂಡತಿಯ ಬಳಿ ಮಾತಾಡಿ ನೋಡಿರಿ. ಒಮ್ಮೆ ಕೆಲಸದವಳು ಬಾರದ ಬಗ್ಗೆ, ಒಮ್ಮೆ ಬೇಳೆ, ಅಕ್ಕಿ, ಹಿಟ್ಟು ಇಲ್ಲದುದರ ಬಗ್ಗೆ ಮಕ್ಕಳಿಗೆ ವಸ್ತ್ರಗಳಿಲ್ಲದ ಬಗ್ಗೆ, ಅಥವಾ ಕಾಯಿಲೆಯ ಬಗ್ಗ ಹೀಗೆ ನಾನಾ ರೀತಿಯ ಕಷ್ಟಗಳನ್ನು ಹೊರಹಾಕುತ್ತಿರುತ್ತಾರೆ. ಗಂಡಸರು ಸದಾ ಅವಿವಾಹಿತ ಜೀವನದ ಬಗ್ಗೆ ಹೊಗಳಿಕೆ, ಮನೆಯ—ಗೃಹಸ್ಥಾಶ್ರಮದಲ್ಲಿ ಬರುವ ಚಿಂತೆಗಳ ಬಗ್ಗೆ ವಿಚಾರ ಮಾಡುತ್ತಿರುತ್ತಾರೆ. ಎಣ್ಣೆ, ಬೆಣ್ಣೆ, ಬೇಳೆ, ಅಕ್ಕಿ, ಸೌದೆ ಇವುಗಳ ಬಗ್ಗೆ ಚಿಂತಿಸುತ್ತಾ ಒಬ್ಬಂಟಿಗರಾಗಿ ಇರುವ ಬಗ್ಗೆ ಚರ್ಚಿಸುತ್ತಾರೆ. ಈ ಮಾತುಗಳನ್ನು ಕೇಳಿ ಕೇಳಿ ನನಗೆ ಸಾಕಾಯಿತು. ಈಗಂತೂ ಈ ಬಗೆಯ ಚರ್ಚೆಗಳನ್ನು ಕೇಳಿದಾಗ ನಕ್ಕುಬಿಡುತ್ತೇನೆ. ಈ ಮಿತ್ರರು ವ್ಯಗ್ರರಾಗುತ್ತಾರೆ. "ನಗು ನಗು ನಿನಗೇನು ಗೊತ್ತು ನಮ್ಮ ಕಷ್ಟಗಳು?" ಎನ್ನುತ್ತಾ ಮತ್ತಷ್ಟು ಪ್ರಕ್ಷುಬ್ಧರಾಗುತ್ತಾರೆ. ಗೃಹಸ್ಥ ಜೀವನದಲ್ಲಿ ಕಷ್ಟಗಳಿಲ್ಲವೆಂದಲ್ಲ. ಅಗತ್ಯ ಅವು ಬಂದೇ ಬರುತ್ತವೆ. ಆದರೆ ಇದು ವ್ಯಾಕುಲತೆಯನ್ನು, ಮಾನಸಿಕ ಪ್ರಕ್ಷುಬ್ಧತೆಯನ್ನು ಮೂಡಿಸಬೇಕಾದ ಆಗತ್ಯವಿಲ್ಲ. ಇವೆಲ್ಲಾ

ಕಾರ್ಯ ಮಾಡಬೇಕಾದ ರೀತಿಗಳು. ಇವುಗಳನ್ನು ಸುಧಾರಿಸಿಕೊಂಡರೆ, ವ್ಯವಸ್ಥಿತವಾಗಿ ಕಾರ್ಯವೆಸಗಿದರೆ, ಪರಸ್ಪರರಲ್ಲಿ ಹೊಂದಾಣಿಕೆ ಬೆಳೆಸಿಕೊಂಡಲ್ಲಿ, ಒಬ್ಬರು ಇನ್ನೊಬ್ಬರ ಕಾರ್ಯಾಭಿರುಚಿಯನ್ನು ಅರಿತುಕೊಂಡರೆ ಈ ಎಲ್ಲಾ ವ್ಯಾಕುಲತೆಗಳೂ ಕ್ಷಣಮಾತ್ರದಲ್ಲಿ ಪರಿಹಾರವಾಗಬಲ್ಲವು.

ನಮ್ಮ ಕ್ರಿಯೆಗಳಲ್ಲಿ ಶೇ. ೬೦ ಭಾಗ ಅಚೇತನ ಮನ (Subconscious mind)ದ ಮೂಲಕ ನಡೆಸಲ್ಪಡುತ್ತವೆ. ಆದ್ದರಿಂದ ಮನದಲ್ಲಿ ಯಾವುದೇ ದುಃಖವಿರಲಿ, ಶರೀರದಲ್ಲಿ ಏನೇ ಕಷ್ಟವಿರಲಿ, ನಿಮ್ಮನ್ನು ಯಾರಾದರೂ ಮಾತನಾಡಿಸಿದಾಗ, ಪ್ರಸನ್ನಚಿತ್ತ ರಾಗಿ, ಉತ್ಸಾಹ ಹಾಗೂ ಪ್ರೀತಿ ತುಂಬಿ ಉತ್ತರಿಸಿರಿ. ನಿಮ್ಮ ಮನದ ವ್ಯಥೆಯನ್ನು ಬೇರೆ ಯವರ ಬಳಿ ಪ್ರಕಟಿಸಬೇಡಿರಿ. ಇದರಿಂದ ನಮಗೆ ಆತ್ಮ-ನಿರ್ದೇಶನ (Auto Suggestion) ಪ್ರಾಪ್ತವಾಗುತ್ತದೆ. ಮತ್ತು ಈ ಆತ್ಮ ನಿರ್ದೇಶನ ನಮ್ಮ ಬಹಳಷ್ಟು ಕಷ್ಟಗಳನ್ನು ಪರಿಹರಿಸಲು ಸಮರ್ಥವಾಗುತ್ತದೆ.

ಮುಗುಳ್ನಗೆಯು ಒಂದು ಪ್ರಿಯವಾದ ಚೆಲುವು. ನಮ್ಮ ಹೃದಯದಿಂದ ಹೊರ ಚಿಮ್ಮಿ ಇನ್ನಿತರರ ಮುಚ್ಚಿದ ಹೃದಯಗಳನ್ನೂ ತೆರೆಯುತ್ತದೆ. ಮುಗುಳ್ನಗೆಯಿಂದ ಅರಳಿದ ಮುಖಪುಷ್ಪಗಳನ್ನು ನೋಡಿ ಸಂತೋಷದ ಧಾರೆ ಪ್ರವಹಿಸುತ್ತದೆ. ಮುಗುಳ್ನಗೆಗಿಂತ ಸುಂದರ ವಾದ ಪುಷ್ಪ ಯಾವುದೂ ಇಲ್ಲ. ಆದ್ದರಿಂದ ಎಂದಿಗೂ, ಯಾವ ಪರಿಸ್ಥಿತಿಯಲ್ಲೂ ಈ

With Best Compliments from:

Phone: Off: 21909
Res: 22909

*Anil Electricals*

ENGINEERS & CLASS I CONTRACTORS

**Bharath Building,**

**ALKE, MANGALORE-575 003.**

ಮುಗುಳ್ನಗೆ ಮಾಸದಂತೆ ನೋಡಿಕೊಳ್ಳಿರಿ. ಕೊನೆಯುವರೆಗೂ ಈ ನಗೆ ಮಲ್ಲಿಗೆ ಬಾಡದಂತೆ ಸಂರಕ್ಷಿಸಿರಿ.

ಮುಗುಳ್ನಗೆ ಒಂದು ಬಹುಮೂಲ್ಯ ವಸ್ತು. ನೀವು ಯಾರಾದರೂ ಮುಗುಳ್ನಗೆಯನ್ನು ಚೆಲ್ಲುವ ಹಸನ್ಮುಖೀ ವ್ಯಕ್ತಿಯನ್ನು ಭೇಟಿ ಮಾಡಿದ್ದೀರಾ? ಆತನ ಮುಗುಳ್ನಗೆಯನ್ನು ನಿಮ್ಮ ಮುಗುಳ್ನಗೆಯಿಂದಲೇ ಉತ್ತರಿಸಿದ್ದೀರೇನು? ನನಗೆ ಸದಾ ಪ್ರಸನ್ನವದನದಿಂದಿರುವ ಓರ್ವ ವ್ಯಾಪಾರಿಯ ಪರಿಚಯವಿದೆ. ತನ್ನ ಅಂಗಡಿಗೆ ಆಗಮಿಸಿದ ಗಿರಾಕಿಗಳನ್ನು ಮಾತನಾಡದೆ ಮುಗುಳ್ನಗೆಯೊಂದಿಗೆ ಸ್ವಾಗತಿಸುತ್ತಾನೆ. ಆದರೆ ಅದರ ಪ್ರಭಾವ ಅದೆಷ್ಟಿರುತ್ತದೆಂದರೆ ಬಂದ ಗಿರಾಕಿಗೆ ಸಾಮಾನು ಕೊಳ್ಳಲೇಬೇಕೆಂಬ ಮನಸ್ಥಿತಿ ಉಂಟಾಗುತ್ತದೆ. ನನಗೆ ಆತನನ್ನು ಕಂಡಮೇಲೆ ಶಬ್ದಗಳಿಗಿಂತಲೂ, ಕರ್ಮದಧ್ವನಿ ಹೆಚ್ಚು ಪ್ರಭಾವಶಾಲಿ–ಎಂಬುದು ಅರಿವಾಯಿತು. ಮುಗುಳ್ನಗುವುದೆಂದರೆ–"ನಾನು ನಿನ್ನನ್ನು ಇಷ್ಟಪಡುತ್ತೇನೆ. ನೀನು ನನ್ನನ್ನು ಸುಖಿಯನ್ನಾಗಿಸಿದೆ, ನಿನ್ನನ್ನು ಕಂಡು ನನಗೆ ಸಂತೋಷವಾಯಿತು" ಎಂದು ತಿಳಿಸಿದಂತೆ. ಇದೇ ಮುಗುಳ್ನಗೆಯ ಹಿಂದಿನ ರಹಸ್ಯ.

ಮನದಲ್ಲಿ ಕಪಟವಿಟ್ಟುಕೊಂಡು, ಹೊರಗೆ ಮುಗುಳ್ನಗೆ ಸೂಚಿಸುವ ಕೆಲವರಿದ್ದಾರೆ. ಇವರು ಜನರನ್ನು ಮರುಳುಗೊಳಿಸುವ ತಂತ್ರವಿದು ಅಷ್ಟೆ. ಇದರಿಂದ ಇಚ್ಛಿತಫಲ ದೊರೆಯದು. ದೊರೆತರೂ ಅದು ಕ್ಷಣಿಕ. ನಿಜವಾದ ಮುಗುಳ್ನಗೆ ಪರಸ್ಪರರಲ್ಲಿ ಉತ್ಸಾಹ, ಸ್ನೇಹ–ವಾತ್ಸಲ್ಯಗಳನ್ನು ಉಂಟುಮಾಡುತ್ತವೆ.

ಆದುದರಿಂದ ನಗುನಗುತ್ತಾ ಬಾಳುವುದನ್ನು ಕಲಿಯಿರಿ. ಮುಗುಳ್ನಗೆಯಿಂದ ನಿಮ್ಮ ಕಾರ್ಯ ಸಫಲವಾಗುತ್ತದೆ; ನಿಮಗೆ ಆನಂದ ಉಂಟಾಗುತ್ತದೆ. ಯಾರಾದರೂ ನಿಮ್ಮ ಸ್ಥಿತಿ-ಗತಿಯನ್ನು ವಿಚಾರಿಸಿದರೆ ತಟ್ಟನೆ ಮುಖದಲ್ಲಿ ಮುಗುಳ್ನಗೆ ತುಂಬಿ ಉತ್ತರಿಸಿ–"ಚೆನ್ನಾಗಿದ್ದೇನೆ. ನೀವು ಹೇಗಿದ್ದೀರಿ?'' ಆಗ ಕೇಳಿದ ವ್ಯಕ್ತಿಯಲ್ಲಿಯೂ ಒಂದು ಬಗೆಯ ಸ್ಫೂರ್ತಿ, ನವಜೀವನ, ಉತ್ಸಾಹ ಮತ್ತು ಚೈತನ್ಯ ಒಡಮೂಡಿ ಆತನ ಮನದ ಬೇಸರ ಬಹಳಷ್ಟು ದೂರವಾಗುತ್ತದೆ. ಎಲ್ಲ ಕಾರ್ಯಗಳಲ್ಲೂ ಯಶಸ್ವಿಯಾಗಲು ಈ ಮುಗುಳ್ನಗೆಯ ಕೊಡುಗೆ ಅತ್ಯಂತ ದೊಡ್ಡದು.

ಮುಗುಳ್ನಗೆಯು ಇತರರ ಅಂತಃಕರಣವನ್ನು ಹೊರಗೆಳೆಯುವ ಇಂದ್ರಜಾಲದಂಡ. ಇದರ ಬೆಲೆಯನ್ನು ಹಣದಿಂದ ಅಳೆಯಲಾಗದು, ಯಾವುದೇ ವ್ಯಕ್ತಿಯ ಸಫಲತೆಯ ಕಾರಣವನ್ನು ಆತನ ವ್ಯಕ್ತಿತ್ವ, ಅವನ ಆಕರ್ಷಣಾಶಕ್ತಿ, ಮತ್ತು ಜನರನ್ನು ಪ್ರೀತಿಯಿಂದ ಅಂತಃಕರಣಕ್ಕೆ ತೆಗೆದುಕೊಳ್ಳುವ ಯೋಗ್ಯತೆಯಿಂದ ಅಳೆಯಬಹುದು. ಆತನ ವ್ಯಕ್ತಿತ್ವದ ಅತ್ಯಂತ ಆಕರ್ಷಕ, ಆನಂದಪ್ರದ ಮಾನದಂಡ ಆತನ ಮುಗುಳ್ನಗೆಯೇ ಆಗಿದೆ.

ಪರಮಾತ್ಮನು ಆನಂದ ಸ್ವರೂಪನಾಗಿದ್ದಾನೆ. ಜೀವಾತ್ಮನ ಆನಂದಕ್ಕಾಗಿ ಜಗತ್ತನ್ನು ರಚಿಸಲಾಗಿದೆ. ಆದುದರಿಂದ ಆನಂದ ತುಂದಿಲರಾಗಿರಿ. ಈಶ್ವರನ ಮಕ್ಕಳ ಹೃದಯ ಸದಾ ಸಂತಸದ ಬೀಡಾಗಿರಲಿ. ಈಶ್ವರನ ಪ್ರಸನ್ನತೆಯೇ ನಿಮ್ಮ ಶಕ್ತಿಯಾಗಿದೆ. ಜೀವನದಲ್ಲಿ ಅನೇಕ ಸಂಘರ್ಷ, ಸಂಕಷ್ಟಗಳು, ಆಪತ್ತುಗಳು ಮತ್ತು ನಿರಾಶೆಗಳು ಬಂದೇ

ಬರುತ್ತವೆ. ಅವುಗಳಿಗೆ ಲತ್ತೆ ಕೊಟ್ಟು ದೂರವಾಡಿರಿ. ಇವೆಲ್ಲಾ ನಾವು ನಿರಾಶರಾಗಿ ಕೂಡಲಿಕ್ಕಾಗಿ ಅಲ್ಲ, ಬದಲಿಗೆ ಸಾಹಸ, ಶಕ್ತಿ ಮತ್ತು ದೃಢತೆಯನ್ನು ನೀಡಲಿಕ್ಕಾಗಿ ಬರುತ್ತವೆ.

ಕೇಳಲಿಲ್ಲವೆ ನೀವು ಇಲ್ಲಿ
ವಿಧಾತನ ಮಂಗಳ ವರದಾನವ
ಶಕ್ತಿಶಾಲಿಯಾಗು, ವಿಜಯಿಯಾಗು
ಮೊಳಗಲಿ ವಿಶ್ವದಿ ಜಯಗಾನ ।
ಹೆದರದಿರು ನೀ ಅವನ ಅಮೃತ ಪುತ್ರ
ಆಗಲಿ ಮುಂದೆ ಕಲ್ಯಾಣಕಾರೀ ವೃದ್ಧಿ.
ಪೂರ್ಣ ಆಕರ್ಷಣ ಜೀವನ ಕೇಂದ್ರವು
ಚಿಮ್ಮಿಬರುವುವು ಸಕಲ ಸಮೃದ್ಧಿ ॥

ಎಲ್ಲದರಲ್ಲೂ ಸರಳಮಾರ್ಗವನ್ನೇ ನಮ್ಮದಾಗಿಸಿಕೊಳ್ಳುವುದೊಂದು ಹೆಗ್ಗಳಿಕೆಯಲ್ಲ, ಜೀವನದಲ್ಲಿ ಬಂದೇ ತೀರುವ ಸಂಕಷ್ಟಗಳನ್ನು ಧೈರ್ಯದಿಂದ ಎದುರಿಸುವುದೇ ಮಹಾನತೆ. ನಿಮಗೆ ಎದುರಾಗುವ ಸಂಕಟಮಯ ಪರೀಕ್ಷೆಗಳಿಗೆ ಹೂಂಕಾರದ ಗರ್ಜನೆಯ ಪಂಥಾಹ್ವಾನ ನೀಡಿರಿ. ಹೇಳಿರಿ :—

ನೀವು ನನ್ನ ಮೇಲೆ ಅನುಗ್ರಹ ಮಾಡಬೇಕಿಲ್ಲ
ಇಳಿಯಲಾರೆನು ನಾನು ನಿಮ್ಮ ಕೆಳಸ್ತರಕೆಲ್ಲ
ಬೇಕಾದುದನು ಪಡೆಯಲು ನಾನು ನೀಡುವೆ ಅದರ ನಿಜ ಬೆಲೆಯ
ಸರಳವಾದುದನು ಆಯ್ದುಕೊಳ್ಳದೆ ಸಾಗುವೆ ಮಹತಿನ ಕಡೆಗೆ

ಎಷ್ಟೇ ಕಠಿಣ ಪರೀಕ್ಷೆಯು ಬರಲಿ
ಮಾತು ಮಾತಲೂ ಭ್ರಾಮಕ ಮೃಗಜಲ
ಎನ್ನುವ ದುರ್ಬಲ ಬಿಂದುವ ಹಿಡಿದು
ಸಾಗೆನು ನಾನು ಸರಳಮಾರ್ಗದಿ

ಮಾಡುವೆ ಬಹುಶ್ರಮ ಪ್ರತಿಕ್ಷಣದಲ್ಲೂ
ರಾತ್ರಿ–ಹಗಲಿನ ಪ್ರತಿದಿನದಲ್ಲೂ
ಕೇಳು ಪರೀಕ್ಷಕ ನನ್ನಯ ಛಲವ
ಎಂದಿಗೂ ಸಾಗೆನು ಸರಳ ಮಾರ್ಗದಿ

ಕೊನೆಯಲ್ಲಿ ಆಚಾರ್ಯ ಶ್ರೀ ನರದೇವ ಶಾಸ್ತ್ರಿಯವರ ಶಬ್ದಗಳೊಂದಿಗೆ ಈ ಲೇಖನಕ್ಕೆ ಮಂಗಳ ಹಾಡುತ್ತೇನೆ. "ಸುಖಬೇಕೆಂದಾದರೆ ದುಃಖದ ಬಗ್ಗೆ ಚಿಂತೆಮಾಡುವುದನ್ನು ಬಿಡು. ಧನಿಕನಾಗಬೇಕೆಂದಾದರೆ ದಾರಿದ್ರ್ಯದ ಬಗ್ಗೆ ಚಿಂತಿಸುವುದನ್ನು ಬಿಡು. ನಿನ್ನಲ್ಲಿರುವ ಸರ್ವಶಕ್ತನಾದ ಪ್ರಭುವಿನ ಮೇಲೆ ವಿಶ್ವಾಸವಿಡು. ನಿನ್ನಲ್ಲಿ ಆ ಪ್ರಭು ಪ್ರದತ್ತವಾದ ಶಕ್ತಿಗಳಿರುವುದನ್ನು ಅರಿತುಕೊಳ್ಳು. ಜೀವನದಲ್ಲಿ ಸಫಲನಾಗುವೆ."

———

# ಹೈದರಾಬಾದ್‌ನ ಗಣೇಶೋತ್ಸವ

## ಕೋಟ್ಯಂತರ ರೂಪಾಯಿಗಳು ನೀರಿನಲ್ಲಿ

● ಗಂಗಾರಾಮ ಆರ್ಯ.

[ವೇದಗಳಲ್ಲಿ ಪರಮಾತ್ಮನನ್ನೇ ಗಣಪತಿಯೆಂದು ಸಂಬೋಧಿಸಲಾಗಿವೆ. ಪ್ರಜಾಗಣ, ದೇವಗಣ, ಪಕ್ಷಿಗಣ, ಪಶುಗಣ, ಇತ್ಯಾದಿ ಗಣಗಳ ಅಧಿಪತಿಯಾದ್ದರಿಂದ ಪರಮಾತ್ಮನು ಗಣಪತಿಯೆನಿಸುತ್ತಾನೆ. ಋಗ್ವೇದ, ಯಜುರ್ವೇದಗಳಲ್ಲಿ ಬಂದಿರುವ ಗಣಪತಿಯೆಂದರೆ, ಸರ್ವವ್ಯಾಪಕನೂ ಸಕಲ ಬ್ರಹ್ಮಾಂಡದ ಅಧಿನಾಯಕನಾದ ಪರಮಾತ್ಮನೇ ಆಗಿದ್ದಾನೆ. ಆದರೆ ವೇದಗಳ ಜ್ಞಾನ ಖಿಲವಾಗುತ್ತಾ ಬಂದಂತೆ ಕಾಲ್ಪನಿಕವಾದ ಚಿತ್ರ-ವಿಚಿತ್ರರೂಪಗಳಿಂದ ಕೂಡಿದ ಗಣಪತಿಯು ಪರಮಾತ್ಮನ ಬದಲಾಗಿ ಬಂದು ಕುಳಿತಿದೆ. ಅದರ ವಿವರಗಳೂ ಹಿಂದಿನ ವರ್ಷಗಳ ಸ್ವಾಧ್ಯಾಯ ವಿಶೇಷಾಂಕವನ್ನು ಅಧ್ಯಯನ ಮಾಡಿದವರಿಗೆ ತಿಳಿದಿರಬಹುದು. ಕಾಲ್ಪನಿಕ ಗಣಪತಿಯ ಪೂಜೆ ಜಾರಿಗೆ ಬಂದು ಬಹುಕಾಲವಾಗಿದ್ದರೂ, ಭಾರತದ ಸ್ವಾತಂತ್ರ್ಯದ ಪೂರ್ವದಲ್ಲಿ ಭಾರತೀಯರನ್ನು ಹೋರಾಟಕ್ಕೆ ಸಂಘಟಿಸಲು ಲೋಕಮಾನ್ಯ ತಿಲಕರು ಪೂನಾದಲ್ಲಿ ಇದಕ್ಕೆ 'ಸಾರ್ವಜನಿಕ ಗಣೇಶೋತ್ಸವ'ವೆಂಬುದಾಗಿ ಸಾರ್ವಜನಿಕ ರೂಪವನ್ನಿತ್ತರು. ಅನೈಕ್ಯತೆಯಿಂದ ಹರಿದು ಹಂಚಾಗಿದ್ದ ಭಾರತೀಯ ಸಮಾಜವನ್ನು ಏಕ ಸೂತ್ರದಲ್ಲಿ ಪೋಣಿಸುವುದೇ ಲೋಕಮಾನ್ಯರ ಏಕಮೇವ ಆಶಯವಾಗಿತ್ತು. ಆದರೆ ಸ್ವಾತಂತ್ರ್ಯಾನಂತರ ಸಾರ್ವತ್ರಿಕ ಕಾರ್ಯಕ್ರಮಗಳ ಹೆಸರಿನಲ್ಲಿ ಸಾರ್ವಜನಿಕ ಗಣೇಶೋತ್ಸವ ಪಡೆದ ಸ್ವರೂಪವೇ ಬೇರೆ. ಕುಡಿತ, ಕುಣಿತ, ಹಣದ ಅಪಾರ ದುರ್ವ್ಯಯ, ಭ್ರಷ್ಟಾಚಾರ, ಅನಾಚಾರಗಳ ಹೆಚ್ಚಳ ಹಿಂದೆಂದೂ ಇಲ್ಲದ ಪ್ರಮಾಣದಲ್ಲಿ ವರ್ಧಿಸಲು ಇತ್ತೀಚೆಗೆ ಬೆಳೆದು ಬಂದಿರುವ ಈ 'ಗಣೇಶೋತ್ಸವ'ದ ಕಾಣಿಕೆ ಕಡಿಮೆಯೇನಲ್ಲ. ಮುಂಬೈ, ಪೂನಾ ನಗರಗಳಲ್ಲಿಯಂತೂ ಇದರ ಅನರ್ಥಗಳ ಪರಾಕಾಷ್ಠೆಯನ್ನೇ ನಾವು ಕಾಣುತ್ತಿದ್ದೇವೆ; ಕೇಳುತ್ತಿದ್ದೇವೆ. ಗೂಂಡಾಗಿರಿ ಮತ್ತು ಕೋಮುವಾರು ಗಲಭೆಗಳು ಅಲ್ಲಲ್ಲಿ ನಡೆಯುತ್ತಿರುತ್ತವೆ. ಕಳೆದ ವರ್ಷ ಹೈದರಾಬಾದ್ ನಗರದಲ್ಲಿ ನಡೆದ ಗಣೇಶೋತ್ಸವದ ಬಗೆಗೆ, ಪ್ರತ್ಯಕ್ಷದರ್ಶಿಗಳಿಂದ ಬಂದ ವರದಿಯನ್ನು ಇಲ್ಲಿ ವಾಚಕರ ಲಾಭಾರ್ಥ ಕೊಡಲಾಗಿದೆ.]

ಹೈದರಾಬಾದಿನಲ್ಲಿ ಕಳೆದ ವರ್ಷ ನಡೆದ ಗಣೇಶೋತ್ಸವದ ಬಗ್ಗೆ ಚರ್ಚೆ ವರ್ಷವಿಡೀ ನಡೆಯುತ್ತಿತ್ತು. ಆಗ ನಾವು ಗಣೇಶ ಪೂಜೆಯಲ್ಲಿ ಆಧ್ಯಾತ್ಮಿಕತೆಯೊಂದಿಗೆ ರಾಜಕೀಯವೂ ಸೇರಿದೆ ಎಂದು ಬರೆದಿದ್ದೆವು. ಯಜುರ್ವೇದದಲ್ಲಿ ಗಣೇಶನನ್ನು ಗಣಪತಿ, ರಾಷ್ಟ್ರ ನಿಧಿಗಳ ರಕ್ಷಕ, ಜನತೆಗೆ ಪ್ರಿಯನಾದವನು, ಪ್ರಜೆಗಳಿಗೆ ನಿವಾಸಸ್ಥಾನ ನೀಡುವವನು ಸರ್ವರನ್ನೂ ಚೆನ್ನಾಗಿ ತಿಳಿಯಬಲ್ಲವನು-ಮುಂತಾಗಿ ತಿಳಿಸಿದೆ. ಈ ಮಾತುಗಳು ರಾಷ್ಟ್ರದ ನೀತಿಯನ್ನವಲಂಬಿಸಿ, ಸಾರ್ಥಕವಾಗುತ್ತದೆ. ಈ ನೀತಿಯಲ್ಲಿ ಸ್ವಲ್ಪವಾದರೂ ತಪ್ಪು ಉಂಟಾದರೆ, ನಿರ್ಬಲತೆ ಮೂಡಿದರೆ, ಪೊಳ್ಳುತನ ಕಂಡುಬಂದರೆ ಜನರು ಒಗ್ಗಟ್ಟಾಗಿ ಶಾಸನವನ್ನು ಜಾಗೃತಗೊಳಿಸುವುದು 'ಗಣೇಶ ಪೂಜೆ' ಎಂದೆನಿಸುತ್ತದೆ.

With Best Compliments from



# Asha Trading Company

**Port Road, Bunder**

**MANGALORE-575 001**

PHONE: Office: 26077
Resi. : 25435

Grams: **JOLLY**

For All Your Transport by Road Consult Us:

# THE UNITED STORES

Fleet Owners and Transport Contractors

*Administrative Office* : **AZIZUDDIN ROAD**

MANGALORE-575 001.

**Phones**
( Administrative Office: 24746 Residence: 23561
( Mg. Partner Office: 23996 Residence: 26841
( Manager Office: 23293 Residence: 24946

Daily Services Between Bangalore and Mangalore.

**Branches:** Bangalore, Mysore, Mercara, Udupi, Mangalore, Puttur, & Coondapur.

ಕಳೆದ ವರ್ಷ ಕೊನೆಯುಸಿರೆಳೆಯುತ್ತಿದ್ದ ಚೆನ್ನಾರೆಡ್ಡಿ ಸರಕಾರಕ್ಕೋಸರ ಈ ಪೂಜೆ ಪ್ರಾರಂಭವಾಗಿತ್ತು. ಈ ಪೂಜೆಯ ಹೆಸರಿನಲ್ಲಿ ಬಡ ಹಿಂದೂ ಸಮಾಜದ ಕೋಟಿಗಟ್ಟಲೆ ರೂಪಾಯಿಗಳನ್ನು ನೀರಿನಲ್ಲಿ ಸುರಿದಂತಾಯಿತು. ಆದರೂ ಇದರಿಂದ ಚೆನ್ನಾರೆಡ್ಡಿ ಸರಕಾರವೂ ಉಳಿಯಲಿಲ್ಲ; ಹಿಂದೂ ಸಮಾಜಕ್ಕೂ ಒಂದು ಕುರುಡು ಕವಡೆಯ ಪ್ರಯೋಜನವೂ ಲಭಿಸಲಿಲ್ಲ. ಇದರ ಬದಲಾಗಿ ಪೂಜಾ ಸಮಯದಲ್ಲಿ ಅನೇಕ ಜನರ ಹತ್ಯೆಗಳಾದವು; ನೂರಾರು ಸ್ತ್ರೀ ಪುರುಷರು ಮತ್ತು ಮಕ್ಕಳು ಗಾಯಗೊಂಡರು. ಈ ರೀತಿ ಪೀಡಿತರಾದವರ ಕಣ್ಣೊರಸಲು ಯಾರೂ ಬರಲಿಲ್ಲ; ಮತ್ತು ಇದಕ್ಕಾಗಿ ಒಂದು ಪೈಸೆಯೂ ವಿನಿಯೋಗವಾಗಲಿಲ್ಲ. ಕೊಲೆಗಡುಕರು ಇಂದಿಗೂ ರಾಜಾರೋಷವಾಗಿ ಓಡಾಡಿಕೊಂಡಿದ್ದಾರೆ.

ಈ ಬಾರಿಯೂ ಸಹ ಹಿಂದೂ ಸಂಘಟನೆಯ ಧ್ಯೇಯವನ್ನು ಮುಂದಿರಿಸಿಕೊಳ್ಳಲಾಯಿತು. ಋಗ್ವೇದದಲ್ಲಿ (೧೦-೧೯೧-೧, ೪) ಸಂಘಟನೆಗಾಗಿ, ಒಬ್ಬನೇ ಪರಮಾತ್ಮನನ್ನು ನಂಬುವುದು; ಅವನ ಉಪಾಸನೆಯನ್ನು ಎಲ್ಲರೂ ಸೇರಿ ಮಾಡುವುದು; ಬೇರೆ ಯಾವುದರ ಉಪಾಸನೆಯನ್ನೂ ಮಾಡದಿರುವುದು; ಆಹಾರ-ಪಾನೀಯ, ಆಚಾರ-ವಿಚಾರಗಳಲ್ಲಿ ಏಕತೆ ಇರಬೇಕಾದುದು ಅಗತ್ಯ-ಎಂಬುದನ್ನು ಹೇಳಲಾಗಿದೆ. ವೇದಗಳ ಈ ಮಾತುಗಳ ಅತ್ಯಂತಾಭಾವ ಈ ರೀತಿಯ ಉತ್ಸವಗಳಲ್ಲಿ ಎದ್ದು ಕಾಣುತ್ತದೆ. ವ್ಯವಸ್ಥಾಪಕರ ಎದುರಿಗೆ ಅಧಿವೇಶನ (ಬೈಠಕ್), ಸಭೆ, ವೈಭವ, ಮೆರವಣಿಗೆಗಳು ಮಾತ್ರ ಇರುತ್ತವೆ. ಇವುಗಳಿಂದಲೇ ಹಿಂದೂ ಸಂಘಟನೆಯಾದೀತೇ? ಎಂಬುದು ವಿಚಾರಾರ್ಹ ಸಂಗತಿ.

ಸಭೆ, ಸಮಿತಿ, ವೈಭವಾಡಂಬರ, ಮೂರ್ತಿಗಳು, ಕಣ್ಣು ಕೋರೈಸುವ ದೀಪಗಳು, ಕುಣಿತ, ಹಾಡು, ಇತ್ಯಾದಿಗಳ ತರಾವರಿ ಲೆಕ್ಕವನ್ನು ಕಳೆದ ವರ್ಷ ನಾವು ನೀಡಿದ್ದೇವೆ. ಅವುಗಳನ್ನು ಮತ್ತೆ ವಿವರಿಸಲು ಹೋಗುವುದಿಲ್ಲ. ಈ ವರ್ಷವೂ ಅವು ವಿಜೃಂಭಣೆಯಿಂದ ನಡೆದವು, ಬಹಳಷ್ಟು ದಾಖಲೆಗಳನ್ನು ಸ್ಥಾಪಿಸಿದವು, ಈ ಬಾರಿ ಮೆರವಣಿಗೆ ಸೆಪ್ಟಂಬರ್ ೧೩ಕ್ಕೆ ಹೊರಟಿತು, ೬-೭ ಕೋಟಿ ರೂಪಾಯಿಗಳು ಮಾತ್ರವೇ ಖರ್ಚಾದುದು.

ಈ ಬಾರಿ ಕೆಲವು ಹೊಸ ಅಂಶಗಳೂ ಇದ್ದವು (೧) ಭಾಗ್ಯನಗರ ಗಣೇಶೋತ್ಸವ ಸಮಿತಿಯಂತೆ 'ಹೈದರಾಬಾದ್ ಗಣೇಶೋತ್ಸವ ಸಮಿತಿ'ಯೂ ಸಹ ಹೊಸದಾಗಿ ತಲೆಯೆತ್ತಿತ್ತು. ಈ ಸಮಿತಿಯ ಅಧ್ಯಕ್ಷರು ಶ್ರೀ ಎಂ. ಎ. ರಶೀದ್‌ರವರು-ಇವರು ರಾಜಕೀಯ ಧುರೀಣರು. ಕಾಂಗ್ರೆಸ್ ಅಧ್ಯಕ್ಷರಾದ ಶ್ರೀ ಎಂ. ಎ. ಅಜೀಜ್, ಅಲ್ಪಸಂಖ್ಯಾತ ಆಯೋಗದ ಅಧ್ಯಕ್ಷ ಶ್ರೀ ಗುಲಾಂ ಯಜದಾನೀ ಮುಂತಾದವರು ಇದರ ಸಹಯೋಗಿಗಳು. ಒರಿಸ್ಸಾದ ಮಾಜೀ ರಾಜ್ಯಪಾಲ ನವಾಬ ಮೀರ್ ಅಕಬರ ಆಲೀಖಾನ್ ಈ ಸಮಿತಿಯ ಪ್ರಮುಖ ವಕ್ತಾರರು. ಮುಖ್ಯಮಂತ್ರಿ ಶ್ರೀ ಟಿ. ಅಂಜಯ್ಯನವರು 50 ಕ್ವಿಂಟಾಲ್ ಅಕ್ಕಿಯಿಂದ ತಯಾರಿಸಿದ 'ಪ್ರಸಾದಮ್'ನ್ನು ಈ ವೇದಿಕೆಯಿಂದಲೇ ಹಂಚಿದರು. ಮುಸಲ್ಮಾನ್ ವ್ಯಾಪಾರಿಗಳು ಹಾಗೂ ಮುಸ್ಲಿಂಲೀಗ್ ಕಾರ್ಯಕರ್ತರ ಮುಕ್ತ ಸಹಕಾರವಿತ್ತು (೨) ಎಲ್ಲಾ ರಾಜಕೀಯ ಪಕ್ಷಗಳು, ಇಂದಿರಾ ಕಾಂಗ್ರೆಸ್, ಮಾರ್ಕ್ಸ್‌ವಾದಿ ಕಮ್ಯುನಿಸ್ಟರು—ಇವುಗಳ ಮುಖಂಡರೂ ಇವುಗಳಲ್ಲಿ ಭಾಗವಹಿಸಿದರು. ಇಚ್ಛಾವಿರುದ್ಧವಾಗಿ ರಾಷ್ಟ್ರೀಯ

ಸ್ವಯಂಸೇವಕ ಸಂಘದ ವರಿಷ್ಟ ನಾಯಕರು ರಸ್ತೆಗಳಲ್ಲಿ ಮಾಡಿದ ವೇದಿಕೆಗಳಿಂದ 'ಹುಕುಂ' ಗಳನ್ನು ನೀಡುತ್ತಿದ್ದರು. ಹೆಲಿಕ್ಯಾಪ್ಟರಿನಲ್ಲಿ ಕುಳಿತು ಮುಖ್ಯಮಂತ್ರಿ ಪೋಲೀಸ್ ಮಂತ್ರಿ (ಗೃಹಮಂತ್ರಿ) ಮತ್ತು ಅಧಿಕಾರಿಗಳು ಜನರ ಬಗ್ಗೆ ಬಂದೋಬಸ್ತು ಮಾಡುತ್ತಿದ್ದರು. ರಾಜ್ಯದ ಓರ್ವ ಹಿರಿಯ ಕಾಂಗ್ರೆಸ್ ನಾಯಕರು ಹೆಲಿಕ್ಯಾಪ್ಟರ್‌ನಿಂದ ಮೆರವಣಿಗೆಯ ಶೋಭೆಯನ್ನು ನೋಡುತ್ತಿದ್ದರು. (೩) ಗಣೇಶನ ಮೂರ್ತಿಗಳೂ ಒಂದೇ ರೀತಿ ಇರಲಿಲ್ಲ; ವಿಧವಿಧವಾದ ರೂಪಗಳಿದ್ದವು. ಒಂದು ಮೂರ್ತಿಯ ಶರೀರ ಹನುಮಂತನದಾಗಿದ್ದರೆ. ತಲೆಯು ಗಣೇಶನದಾಗಿತ್ತು; ಒಂದು ಮೂರ್ತಿ ಹಂಸದ ಮೇಲೆ ಕುಳಿತು ಹಾರುತ್ತಿದ್ದಂತೆ ತೋರುತ್ತಿತ್ತು; ರಾಕ್ಷಸನನ್ನು ಕಾಲುಗಳ ಕೆಳಗೆ ಹಾಕಿಕೊಂಡು ತಾಂಡವನೃತ್ಯ ಮಾಡುತ್ತಿದ್ದ ಮೂರ್ತಿ ಮತ್ತೊಂದು. ಶಿವನ 'ಲಿಂಗ'ದಲ್ಲಿ ಕುಳಿತುಕೊಂಡ ಗಣೇಶನ ಮೂರ್ತಿ ಮಗದೊಂದು. ಒಂದು ಮೂರ್ತಿ ಆನೆಯ ಹೊಟ್ಟೆಯಲ್ಲಿತ್ತು; ಅದನ್ನು ನೋಡಲು ಜನರು ಆನೆಯ ಬಾಯಿ ಮೂಲಕ ಒಳಗೆ ಹೋಗಬೇಕಾಗಿತ್ತು; ಇನ್ನೊಂದು ಮೂರ್ತಿ ಹನುಮಂತನ ಕಂಠದ್ವಾರದಿಂದ ಹೊರಟು ಅವನ ನಾಲಿಗೆಯ ಮೇಲೆ ನಾಲ್ಕು ಕುದುರೆಗಳ ರಥವನ್ನು ನಡೆಸುತ್ತಿರುವಂತೆ ಚಿತ್ರಿಸಲಾಗಿತ್ತು. ಯಾವುದೇ ವಿದ್ವಾಂಸರ, ಪಂಡಿತರ, ಪುರಾಣಗಳ, ಅಥವಾ ಶಾಸ್ತ್ರಗಳ ಆಧಾರವಿಲ್ಲದೆ ಕುಶಲ ಕಲಾವಿದರ ಕಲ್ಪನೆಯಿಂದ ಮೂಡಿದ ಈ ಆಕೃತಿಗಳ ಮುಂದೆ ಜನರು ತಲೆಬಾಗಿಸುತ್ತಿದ್ದಾರೆ. (೪) ಈ ಬಾರಿ ಧ್ವಜಗಳು ಎರಡು ಪ್ರಕಾರದ್ದಾಗಿದ್ದುವು. ಒಂದು ಚಿಕ್ಕದು; ಒಂದು ದೊಡ್ಡದು. ಚಿಕ್ಕದರಲ್ಲಿ ಓಂಕಾರದಲ್ಲಿ ಗಣೇಶ, ದೊಡ್ಡದರಲ್ಲಿ ಓಂಕಾರದಲ್ಲಿ ಗಣೇಶ ಮತ್ತು ಅದರ ಕೆಳಗೆ ಭಗವಾನ್ ವೆಂಕಟೇಶ್ವರ. ಇದು ಹೀಗೇಕೆಂದರೆ ಅವುಗಳು ತಿರುಪತಿ ದೇವಸ್ಥಾನದವರಿಂದ ಕೊಡಲ್ಪಟ್ಟತ್ತಂತೆ- ಒಂದು ಸಂಸ್ಥೆ ೪೦ ಮೀಟರ್ ವಸ್ತ್ರವನ್ನು ಕೆಂಪು ಟೋಪಿಗಳಿಗಾಗಿ ಕೊಟ್ಟತ್ತು ಎಲ್ಲಿನೋಡಿದರಲ್ಲಿ ಕೆಂಪು ಟೋಪಿಗಳ ತಲೆಗಳೇ ತುಂಬಿದ್ದವು. ಮುಖ್ಯಮಂತ್ರಿ ಶ್ರೀ ಅಂಜಯ್ಯನವರೂ ಸಹ ತಮ್ಮ ಬಿಳಿಟೋಪಿ ತೆಗೆದು, ಕೆಂಪು ಟೋಪಿ ಧರಿಸಿದ್ದರು. (೫) ಎಲ್ಲಾ ವರ್ಗದ, ಎಲ್ಲಾ ಸಮಾಜಗಳ ಮುಖಂಡರುಗಳೂ ಇದರಲ್ಲಿ ಭಾಗವಹಿಸಿದ್ದರು. ಈ ರೀತಿಯ ಪೂಜಾಪಾಠವನ್ನು ವಿರೋಧಿಸುವ 'ವಿಚಾರವಾದಿ'ಗಳೆಂದೆನಿಸಿಕೊಳ್ಳುವ ಸಂಘ ಸಂಸ್ಥೆಗಳವರೂ ಭಾಗವಹಿಸಿದ್ದರು.

ಈ ರೀತಿಯ ಹೊಸದಾದರೂ ಹಳೆಯದರಂತೆ ಇರುವ, ಹಳೆಯದಾದರೂ ಹೊಸದೆಂಬಂತೆ ತೋರುವ ವಿಷಯಗಳಿಂದ ಹಿಂದೂ ಸಂಘಟನೆ ಆಗುವಂತಹುದಲ್ಲ. ಉತ್ತರ ಭಾರತದಲ್ಲಿ ನಡೆಸಲಾಗುತ್ತಿರುವ ರಾಮಲೀಲೆ, ಕೃಷ್ಣಲೀಲೆ (ರಾಸಲೀಲೆ), ಹಿಂಸೆಗೆ, ಉಪಟಳಕ್ಕೆ ಪ್ರೋತ್ಸಾಹನೀಡುವ ಹೋಳಿಕೋತ್ಸವವೂ, ಶಿವಲೀಲಾ ಮಹೋತ್ಸವವೂ, ಕಲ್ಕತ್ತೆಯ ಕಾಳಿಕಾ ಪೂಜೆಯೂ, ಇನ್ನಿತರ ಕ್ಷೇತ್ರಗಳಲ್ಲಿ ನಡೆಯುವ ಉತ್ಸವಗಳೂ—ಇವೆಲ್ಲವೂ ಸಾಮಾಜಿಕ ಏಕೀಕರಣದ ಹೆಸರಿನಲ್ಲಿ ಜನರಿಂದ ಹಣವನ್ನು ಲೂಟಿಮಾಡುವ ಉಪಾಯವಲ್ಲದೆ, ಸಮಾಜದ ಐಕ್ಯತೆಗಳನ್ನು ಸಾಧಿಸಲು ಇವು ಎಳ್ಳಷ್ಟೂ ಸಹಕಾರಿಗಳಾಗವು. ಇದರಿಂದ ಹಿಂದೂ ಸಂಘಟನೆ ಸಾಧ್ಯವಿಲ್ಲ. ಅದೇ ರೀತಿಯಲ್ಲಿ ಹಿಂದೂ ಸಂಘಟನೆಯಿಲ್ಲದೆ ರಾಷ್ಟ್ರದ ಉನ್ನತಿಯು ಸಾಧ್ಯವಿಲ್ಲವೆಂದೂ ನಾವು ದೃಢವಾಗಿ ಹೇಳುತ್ತೇವೆ. ಹಿಂದೂ ಸಂಘಟನೆಗೆ, ಉತ್ಸವ—ಮೆರವಣಿಗೆಗಳನ್ನು ಏರ್ಪಡಿಸುವ ವ್ಯವಸ್ಥಾಪಕರು ಸರಕಾರ ಹಾಗೂ ವಿಶಾಲ

ಹಿಂದೂ ಸಮಾಜ-ಈ ಮೂವರೂ ವೇದೋಕ್ತ ಮಾರ್ಗದಲ್ಲಿಯೇ ಮುನ್ನಡೆಯಬೇಕು. ಈಗ ಖರ್ಚುಮಾಡುತ್ತಿರುವ ಕೋಟ್ಯಂತರ ರೂಪಾಯಿಗಳನ್ನು ಹಿಂದೂ ಸಮಾಜದ ನಿಜವಾದ ಸಮಸ್ಯೆಗಳ ಪರಿಹಾರಕ್ಕೆ, ಹಿಂದೂ ಸಮಾಜದ ದುಃಖ-ಕ್ಲೇಶಗಳ ನಿವಾರಣೆಗೆ ವ್ಯಯಿಸಬೇಕು. ಆಗ ಮಾತ್ರವೇ ದೇಶ, ಧರ್ಮ, ಜನಾಂಗಗಳ ಉನ್ನತಿ ಸಾಧ್ಯವಾದೀತು.

[ಕೃಪೆ:-"ವರ್ಣಾಶ್ರಮ ಪತ್ರಿಕ್" ಹೈದರಾಬಾದ್]
ದಿನಾಂಕ ೩೦-೯-೧೯೮೧

---

# ಸ್ವಾಧ್ಯಾಯಕ್ಕಾಗಿ ಉಪಾಕರ್ಮ

ವೈದಿಕಧರ್ಮೀಯರಿಗೆಲ್ಲರಿಗೂ ಅತ್ಯಂತ ಶ್ರೇಷ್ಠವಾದ ಹಬ್ಬ ಈ ಶ್ರಾವಣೀ ಉಪಾಕರ್ಮ. ಚಿತ್ರಾ ನಕ್ಷತ್ರಯುಕ್ತವಾದ ಮಾಸವನ್ನು ಚೈತ್ರ ಎಂದು ಕರೆದಂತೆ ವಿಶಾಖಾ ನಕ್ಷತ್ರಯುಕ್ತವಾದ ಮಾಸವನ್ನು ವೈಶಾಖ ಎಂದಂತೆ, ಶ್ರವಣ ನಕ್ಷತ್ರಯುಕ್ತ ಮಾಸವನ್ನು ಶ್ರಾವಣ ಎಂದು ಕರೆಯಲಾಗುವುದು. ಈ ಶ್ರಾವಣ ಮಾಸದಲ್ಲಿ ಬರುವ ಅತ್ಯಂತ ಶ್ರೇಷ್ಠ ಹಬ್ಬವಾದುದರಿಂದ ಇದಕ್ಕೆ 'ಶ್ರಾವಣೀ' ಎಂದೂ ಕರೆಯಲಾಗುತ್ತದೆ. ಉಳಿದೆಲ್ಲಾ ಹಬ್ಬಗಳು ಇಂದು ಮೂಲ ಉದ್ದೇಶದಿಂದ ವಿರೂಪಗೊಂಡು, ಕೇವಲ ತಿಂದು-ಕುಡಿದು, ಕುಣಿದಾಡುವ ಉತ್ಸವಗಳಾಗಿ ಆಚರಿಸಲಾಗುತ್ತಿವೆಯಾದರೂ, (ತನ್ನ ಮೂಲಸ್ವರೂಪದ ಪ್ರಬಲ ಅನುಷ್ಠಾನದ, ಸಾರ್ಥಕತೆ ಇಂದು ಇಲ್ಲವಾದರೂ,) ವಿರೂಪಗೊಳ್ಳದಿರುವ ಪರ್ವವೆಂದರೆ ಉಪಾಕರ್ಮವೊಂದೇ. ಹಾಗೆಂದ ಮಾತ್ರಕ್ಕೆ ಉಪಾಕರ್ಮದ ಯಥಾವತ್ತಾದ ಆಚರಣೆಯಿಂದು ಇದೆಯೆಂದಲ್ಲ. ಆದರೆ ಬೇರೆ ಹಬ್ಬಗಳಲ್ಲಿರುವ ತಿಂದು, ಕುಡಿದು, ಕುಣಿಯುವುದೇ ಮುಂತಾದವುಗಳ ಆಚರಣೆ ಈ ಹಬ್ಬಕ್ಕೆ ಕಾಲಿಟ್ಟಿಲ್ಲ. ತುಂಡಾದಾಗಲೋ, ಮನೆಯಲ್ಲಿ ಆಚರಿಸಲಾಗುವ ಶ್ರಾದ್ಧ, ಇತ್ಯಾದಿ ಸಂದರ್ಭಗಳಲ್ಲಿ ಯಜ್ಞೋಪವೀತವನ್ನು ಬದಲಾಯಿಸುವ ಪದ್ಧತಿಯಿರುವುದಾದರೂ ಶ್ರಾವಣೀ ಉಪಾಕರ್ಮದಲ್ಲಿ ಉಪವೀತ ಬದಲಾಯಿಸುವ ಉದ್ದೇಶದ ಗಾಂಭೀರ್ಯವೇ ಬೇರೆ.

ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ-ಈ ನಾಲ್ಕು ಮಾಸಗಳಲ್ಲಿ 'ಚಾತುರ್ಮಾಸ್ಯ' ವ್ರತವನ್ನು ಆಚರಿಸುವ ಪದ್ಧತಿ ಇದೆ. ಇಂದು ಚಾತುರ್ಮಾಸ್ಯವನ್ನು ಆಚರಿಸುವುದು ಕೇವಲ ಮಠಾಧಿಪತಿಗಳು ಮಾತ್ರ. ಇದು ಅವರಿಗೆ ಮಾತ್ರ ಅನ್ವಯಿಸುವ ಕಾರ್ಯವೆಂಬ ಭಾವನೆ ಜನಸಾಮಾನ್ಯರಲ್ಲಿ ಮೂಡಿದೆ. ಆದರೆ ಇದು ಸರ್ವಥಾ ಸರಿಯಲ್ಲ. ಪರ್ಯಟನೆಯಲ್ಲಿ ಸದಾ ತೊಡಗಿರುವ ಸನ್ಯಾಸಿಗಳು, ಅರಣ್ಯಗಳಲ್ಲಿ ನೆಲೆಸಿ ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿರುವ ಯೋಗಿಗಳು, ವಿದ್ವಾಂಸರು ಸತತವಾಗಿ ಮಳೆ ಬೀಳುವ ಈ ಕಾಲದಲ್ಲಿ ಒಂದೆಡೆ ನೆಲೆಸಿ ಅಲ್ಲಿಯ ನಿವಾಸಿಗಳಿಗೆ ವೇದಗಳ ಅಮೃತಸುಧೆಯ ಪಾನ ಮಾಡಿಸುತ್ತಿದ್ದರು. ಜನಸಾಮಾನ್ಯರೂ ಸಹ ಕೃಷಿ, ವ್ಯಾಪಾರ, ರಾಜ್ಯ ರಕ್ಷಣೆ-ಇತ್ಯಾದಿ ವೃತ್ತಿಗಳಲ್ಲಿ ಯಥೇಷ್ಟ ಬಿಡುವು ದೊರಕುವುದರಿಂದ ಇಹಪರಗಳನ್ನು ಹಸನುಗೊಳಿಸುವ ಜ್ಞಾನವನ್ನು ಹೊಂದಲು ವಿದ್ವಾಂಸರ ಆಶ್ರಯದಲ್ಲಿ ವೇದಾಧ್ಯಯನಕ್ಕೆ ತೊಡಗುತ್ತಿದ್ದರು. ಇದು ಒಂದು ರೀತಿಯ ಅಧ್ಯಯನ ಶಿಬಿರ (Study Camp) ದಂತೆ ಕಾರ್ಯವೆಸಗು

ತ್ತಿತ್ತು. ಇದರ ಉದ್ಘಾಟನಾಮಹೋತ್ಸವವೇ ಶ್ರಾವಣೀ ಉಪಾಕರ್ಮ. ಅಂದು ಸಮಸ್ತರೂ ಒಂದೆಡೆ ಸೇರಿ, ಆಚಾರ್ಯವರ್ಯರ ಸಮ್ಮುಖದಲ್ಲಿ ವೇದಾಧ್ಯಯನಕ್ಕೆ ತೊಡಗಲು ಸಂಕಲ್ಪವನ್ನು ಮಾಡುತ್ತಿದ್ದರು. ಇಂತಹ ಸಂಕಲ್ಪದ ಸಂಕೇತವಾಗಿ ನೂತನ ಯಜ್ಞೋಪವೀತವನ್ನು ಧಾರಣ ಮಾಡಲಾಗುತ್ತಿತ್ತು.

ಯಜ್ಞೋಪವೀತವು ಮೂರೆಳೆಗಳಿಂದ ಕೂಡಿದ್ದು ಆ ಮೂರು ಎಳೆಗಳಲ್ಲಿಯೂ, ಒಂದೊಂದರಲ್ಲೂ ಮತ್ತೆ ಮೂರು ಮೂರು ಎಳೆಗಳನ್ನು ತಿರುಪಿ ಮಾಡಲಾಗಿದೆ. ಅಂದರೆ ಅದರಲ್ಲಿ ಒಂಭತ್ತು ಎಳೆಗಳು ಹೊಸೆದುಕೊಂಡಿವೆ. ಇವು ದೇವ ಋಣ, ಪಿತೃ ಋಣ, ಋಷಿ (ಆಚಾರ್ಯ) ಋಣವೆಂಬ ಋಣತ್ರಯಗಳ ಪರಿಹಾರದ ಸಂಕೇತ. ಮನಃಶುದ್ಧಿ, ವಾಕ್ಶುದ್ಧಿ ಮತ್ತು ದೇಹ ಶುದ್ಧಿಗಳೆಂಬ ತ್ರಿವಿಧ ಶುದ್ಧಿಗಳನ್ನು ಸಾಧಿಸಬೇಕೆಂಬುದರ ಸಂಕೇತ. ಜೀವನ ರಥದ ಜ್ಞಾನ, ಕರ್ಮ, ಉಪಾಸನೆಗಳೆಂಬ 'ತ್ರಿಚಕ್ರ'ದ ಅನುಷ್ಠಾನದ ಸಂಕೇತ. ಇಂತಹ ಭವ್ಯವಾದ ಉದ್ದೇಶವನ್ನು ಹೊಂದಿರುವ ಯಜ್ಞೋಪವೀತಧಾರಣೆಯನ್ನು ಮಾಡುವಾಗ ಮಾಡುವಾಗ ವೈದಿಕ ಧರ್ಮಿಯನು ಉಚ್ಚರಿಸುವ ಮಂತ್ರವಿದು.

**ಓಂ ಯಜ್ಞೋಪವೀತಂ ಪರಮಂ ಪವಿತ್ರಂ**
**ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ ।**
**ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ**
**ಯಜ್ಞೋಪವೀತಂ ಬಲಮಸ್ತು ತೇಜಃ ॥೧॥**
**ಓಂ ಯಜ್ಞೋಪವೀತಮಸಿ ಯಜ್ಞಸ್ಯ ತ್ವಾ**
**ಯಜ್ಞೋಪವೀತೇನೋಪನಹ್ಯಾಮಿ ॥೨॥** [ಪಾರಸ್ಕರ ಗೃಹ್ಯಸೂತ್ರ]

**ಅರ್ಥ:-** ಯಜ್ಞೋಪವೀತವು ಪರಮ ಶ್ರೇಷ್ಠವಾದುದು; ಪವಿತ್ರವಾದುದು. ಹಾಗೂ ಆತ್ಮನನ್ನು ಪ್ರಹಾರದಿಂದ ರಕ್ಷಿಸುವಂತಹುದು. ಇದು ಯಜ್ಞದೊಂದಿಗೆಯೇ ಉದ್ಭವಿಸುವುದು ನೀನು ಪ್ರಗತಿಯುಕ್ತವೂ, ಶುದ್ಧವೂ ಆದ ಜೀವನವನ್ನು ಬೆಳಗಿಸಿಕೊ. ಆಗ ನಿನಗೆ ಬಲ ಮತ್ತು ತೇಜಸ್ಸು ಸಿಕ್ಕುವುದು.

ಓ ಮಾನವ! ನೀನು ಸತ್ಕರ್ಮಗಳಿಂದಲೇ ವಿಕಸಿತನಾಗುವವನು. ಉಪಾಸ್ಯನಾದ ಪರಮಾತ್ಮನ ಪ್ರೀತಿಗೆ ಪಾತ್ರನಾದ ನಿನ್ನನ್ನು ಈ ಯಜ್ಞೋಪವೀತದಿಂದ ಸಂಯತನನ್ನಾಗಿ ಮಾಡುವೆ.

ಈ ಮೇಲಿನ ಮಂತ್ರಗಳಲ್ಲಿಯೇ ಯಜ್ಞೋಪವೀತವನ್ನು ಧರಿಸುವುದರ ಮಹತ್ವ, ಉದ್ದೇಶಗಳ ಸ್ಪಷ್ಟ ಚಿತ್ರಣ ಅಡಗಿದೆ. ಜೀವನದಲ್ಲಿ ಪಾವಿತ್ರ್ಯ ಕಾಪಾಡಿಕೊಳ್ಳುವುದರಿಂದ ದೀರ್ಘಾಯುಷ್ಯ, ನಿರೋಗ ದೃಢಕಾಯ, ಲಭಿಸಿ ಜೀವನ ಬೆಳಗುತ್ತದೆ. ಇದರಿಂದಲೇ ತೇಜಸ್ವಿಯಾದ ವ್ಯಕ್ತಿತ್ವ ನಿರ್ಮಾಣವಾಗುತ್ತದೆ. ಸತ್ಕರ್ಮಗಳೇ ವ್ಯಕ್ತಿತ್ವ ವಿಕಾಸದ ಏಣಿಯಾಗಿವೆ. ಆದರೆ ಸತ್ಕರ್ಮಗಳು ಯಾವುವು? ದುಷ್ಕರ್ಮಗಳಾವುವು?–ಎಂಬುದನ್ನರಿಯಲು ಬೇಕಾದ ಜ್ಞಾನ ನಿರ್ಮಲವಾದ ಬುದ್ಧಿ ಎಲ್ಲಿಂದ ದೊರಕೀತು? ನಿರ್ಮಲ ಜ್ಞಾನದ ಆಗರವಾದ ವೇದಗಳಿಂದ ಮಾತ್ರ! ಇದಕ್ಕಾಗಿಯೇ ವೇದಾಧ್ಯಯನ ಅಗತ್ಯ ಮಾತ್ರವಲ್ಲ, ಅನಿವಾರ್ಯವೇ ಆಗಿದೆ. ಇದನ್ನರಿತಿದ್ದ ನಮ್ಮ ಪ್ರಾಚೀನ ಋಷಿ-ಮುನಿಗಳು ಜನಸಾಮಾನ್ಯ ನಿತ್ಯ ಜೀವನದಲ್ಲಿ ಈ ವೇದಾಧ್ಯಯನಕ್ಕೆ

ಯೋಗ್ಯ ಕಾಲವನ್ನು ನಿಶ್ಚಯಿಸಿ ಅಳವಡಿಸಿದ್ದಾರೆ. ಈ ಶ್ರಾವಣೀ ಉಪಾಕರ್ಮವು ಇಂತಹ ವೇದಾಧ್ಯಯನ ಪ್ರಾರಂಭವಾಗುವ ಪವಿತ್ರ ಉತ್ಸವ. ಬೃಹದ್ಯಜ್ಞವನ್ನು ಏರ್ಪಡಿಸಿ ಜಲ-ವಾಯು-ಪರಿಸರಗಳ ಶುದ್ಧೀಕರಣವನ್ನು ಮಾಡುವುದರೊಂದಿಗೆ ಜನ ಸಾಮಾನ್ಯರ ಮಸ್ತಿಷ್ಕಗಳಲ್ಲಿ ಅಡಗಿರಬಹುದಾದ ಪ್ರಗತಿ ವಿರೋಧಿಯಾದ ಭ್ರಾಂತಿಗಳು, ಘಾತುಕ ಪ್ರವೃತ್ತಿಗಳ ನಿರ್ಮೂಲನ ಪವಿತ್ರ ವೇದಾಧ್ಯಾಯನದ ಮೂಲಕ ಸಾಧ್ಯವಾಗುತ್ತದೆ. ವಾತಾವರಣದ ಬಾಹ್ಯ ಶುದ್ಧಿಯೊಂದಿಗೆ ಮಾನವನ ಅಂತರಂಗವೂ ಶುದ್ಧಗೊಂಡಾಗ ಮಾನವನ ಜೀವನದ ಸಂತಸದ ಬೀಡು, ಸಾರ್ಥಕತೆಯ ಗೂಡಾಗದೇ?

ಈ ಶ್ರಾವಣೀ ಉಪಾಕರ್ಮವನ್ನು ಇಂದಿನ ವೈದಿಕ ಧರ್ಮಿಯರೆನಿಸಿಕೊಂಡವರೂ ಸಹ ಆಚರಿಸುತ್ತಾರಾದರೂ ಋಗ್ವೇದಿಗಳೂ, ಯಜುರ್ವೇದಿಗಳೂ, ಸಾಮವೇದಿಗಳೂ ಬೇರೆ ಬೇರೆ ದಿವಸಗಳಲ್ಲಿ ಆಚರಿಸುತ್ತಾರೆ. ಇದೆಲ್ಲಾ ಇತ್ತೀಚೆಗೆ ಬೆಳೆದು ಬಂದ ಶಾಖಾಭೇದಗಳು. ಪ್ರಾಚೀನ ಭಾರತ ವರ್ಷದಲ್ಲಿ ಈ ಭೇದವಿರಲಿಲ್ಲವೆಂದೂ, ಶ್ರಾವಣ ಪೌರ್ಣಿಮೆಯಂದೇ ಆಚರಿಸುತ್ತಿದ್ದರೆಂದೂ ಪ್ರಾಚೀನ ಗ್ರಂಥಗಳಿಂದ ತಿಳಿದು ಬರುತ್ತದೆ. ಈ ಪವಿತ್ರ ಪರ್ವದ ಆಚರಣೆಗೆ ಹಿಂದೆ ಸರಕಾರ ರಜಾ ಘೋಷಿಸಿದ್ದು, ಈಗ ಅದೂ ಮನ್ನಾ ಮಾಡಲಾಗಿದೆ. ಇದಕ್ಕೆ ಬೇರೆ ರಾಜಕೀಯ ಕಾರಣಗಳೂ ಇರುವಂತೆ, ವೈದಿಕ ಧರ್ಮಿಯರೆನಿಸಿಕೊಂಡವರಲ್ಲಿ ನಿಶ್ಚಿತ ದಿನದ ಬಗ್ಗೆ ಐಕಮತ್ಯ ಇಲ್ಲದಿರುವುದೂ ಒಂದೂ ಪ್ರಮುಖ ಕಾರಣ. ಆದುದರಿಂದ, ಉಪಾಕರ್ಮದ ಸಾಂಗವಾದ ಆಚರಣೆಗಾಗಿ ಒಂದೇ ದಿವಸದ ಆಚರಣೆಯನ್ನು ಜಾರಿಗೊಳಿಸಬೇಕಾದುದು ಆಗತ್ಯ. ಆಗ ಎಲ್ಲರೂ ಒಂದೆಡೆ ಕಲೆತು ಬೃಹದ್ಯಜ್ಞ, ವೇದ ಪ್ರವಚನ ಇತ್ಯಾದಿಗಳನ್ನು ನಡೆಸಲು ಅನುಕೂಲವಾಗುತ್ತದೆ. ಪ್ರಾಚೀನ ಕಾಲದಲ್ಲಿ ಈ ಪರ್ವದ ಮಹತ್ವ ಎಷ್ಟಿತ್ತೋ ಈಗಲೂ ಅಷ್ಟೇ ಇದೆ. ಮಾತ್ರವಲ್ಲ, ಮಾನಸಿಕ, ಆತ್ಮಿಕ, ಸಾಮಾಜಿಕ ಪರಿಸ್ಥಿತಿಗಳು ಹದಗೆಟ್ಟಿರುವ ಈ ದಿನಗಳಲ್ಲಿ ಅದರ ಆಗತ್ಯ ಮತ್ತೂ ಹೆಚ್ಚಿದೆ. ಪ್ರಾಚೀನ ಕಾಲದಲ್ಲಿದ್ದಂತೆ ಶಾಸ್ತ್ರೋಕ್ತ ಉಪಾಕರ್ಮವನ್ನು ಪುನಃ ಆಚರಣೆಯಲ್ಲಿ ತಂದದ್ದಾದರೆ ನಮ್ಮ ಸಮಾಜವು ಎಲ್ಲಾ ರೀತಿಯ ಸಂಕಷ್ಟಗಳಿಂದ ಮುಕ್ತವಾಗಿ ಭವ್ಯಜನಾಂಗವಾಗಿ ಬಾಳಬಲ್ಲದು.

---

## ಮಾರ್ಟಿನ್ ಲೂಥರ್ ಮತ್ತು ದಯಾನಂದ ಸರಸ್ವತಿ

● ಪಂ|| ಮಂಜುನಾಥ ಶಾಸ್ತ್ರಿ, ಎಂ. ಎ.

ವಿಶ್ವ ಇತಿಹಾಸದ ಪ್ರಾಚೀನ, ಮಧ್ಯ ಹಾಗೂ ಆಧುನಿಕ-ಎಲ್ಲಾ ಕಾಲಗಳು, ನಿರ್ಮಾಣ ಕಾಲವಾಗಿದ್ದು ಪ್ರಾಚೀನ ಕಾಲವು ನವೀನ ಮತ್ತು ಮೌಲಿಕ ಮತಗಳ—ಇಸ್ಲಾಂ (ಅರಬ) ಬೌದ್ಧಮತ (ಭಾರತ) ಜೋರಾಷ್ಟ್ರದ ಅಥವಾ ಪಾರಸೀಮತ (ಇರಾಣ) ಕ್ರೈಸ್ತಮತ (ಯೂರೋಪ)—ಜನ್ಮ ಹಾಗೂ ಪ್ರಸಾರಕಾಲವಾಗಿದೆ. ಇವುಗಳ ಪೈಕಿ ಎಲ್ಲಾ ಮತಗಳು ಇಂದಿಗೂ ಬಾಳಿಕೊಂಡಿದ್ದು ರಾಷ್ಟ್ರಧರ್ಮ ರೂಪದಲ್ಲಿ ಪ್ರಚಲಿತವಾಗಿವೆ. ದೇಶದಲ್ಲಿ

ಹೆಚ್ಚುತ್ತಿರುವ ವಿತಂಡವಾದ, ಪಾಷಂಡತನ, ಆಡಂಬರ, ರೂಢಿವಾದ ಜಟಿಲಕರ್ಮಕಾಂಡ ಹಾಗೂ ಧಾರ್ಮಿಕ ಸಾಮಾಜಿಕ ವಿಷಮತೆಗಳಿಂದಾಗಿ ಈ ಮತಗಳು ತಲೆಯೆತ್ತಿದವು. ಅಂಥ ಕಾರದಲ್ಲಿ ಮುಗ್ಗರಿಸುತ್ತಿದ್ದ, ಮಿಥ್ಯಾಪೂರ್ಣ ತಥ್ಯಗಳನ್ನು ಶೇಖರಿಸುತ್ತಿದ್ದ ದೇಶ, ಸಮಾಜ ಹಾಗೂ ಜನತೆ ವಿಘಟನೆಯ ಸ್ಥಿತಿಯನ್ನೆದುರಿಸಬೇಕಾಗಿ ಬಂದಾಗ ಪುನರ್ನಿರ್ಮಾಣದ ಪರಮಾವಶ್ಯಕತೆ ಕಂಡುಬಂದು ಮೇಲೆ ಹೇಳಿದ ಮತಗಳೂ ಅವುಗಳ ಪ್ರವರ್ತಕರೂ ನಿರ್ಮಾಣ ಯಜ್ಞವನ್ನಾರಂಭಿಸಿದರು. ಮಧ್ಯಯುಗವು ವಿಶ್ವ ಬರ್ಬರತೆಯ ಹಾಗೂ ಅಸಭ್ಯತೆಯ ಯುಗವಾಗಿದ್ದು ಅದರಲ್ಲಿ ವಿಶ್ವದ ವಿಭಿನ್ನ ದೇಶಗಳು ಬರ್ಬರ ಆಕ್ರಮಣಕಾರಿಗಳ, ಮ್ಲೇಚ್ಛರ ಹಾಗೂ ಅಸಭ್ಯ ಜನರ ಆಕ್ರಮಣಕ್ಕೆ ತುತ್ತಾದವು. ಭಾರತ ಹಾಗೂ ಯೂರೋಪಿನ ಕೆಲವು ದೇಶಗಳು ವಿದೇಶೀ ಆಕ್ರಮಣಕಾರಿಗಳಿಂದ ಆಕ್ರಾಂತವಾಗಿ ಸಮಾಜಗಳೂ, ದೇಶಗಳೂ ಪುನಃ ವಿಘಟನೆಗೆ ಸಿದ್ಧವಾದವು. ಧರ್ಮಗಳೂ ದರ್ಶನಗಳೂ ದುರೂಹತೆಗೆ ಸಿಕ್ಕಿ ಹಾಕಿಕೊಂಡವು. ನಿರಂಕುಶ ಶಾಸಕರು ಶಾಸನದ ಮೇಲೆಯೂ, ಪೋಪರೂ, ಪಾದ್ರಿಗಳೂ ಸೇರಿ ಧರ್ಮಗಳ ಮೇಲೆ ಏಕಚ್ಛತ್ರಾಧಿಪತ್ಯ ಸ್ಥಾಪಿಸಿಕೊಂಡರು. ಪುನರ್ನಿರ್ಮಾಣ ಗಳಿಗೆ ಪುನಃ ಒಂದ ಬಾರಿ ಕಾಣಿಸಿಕೊಂಡಿತು. ನಿರ್ಮಾಣಕ್ಕಾಗಿ ಕೆಲವು ಕಡೆ ಭಕ್ತಿ ಆಂದೋಳನವೂ (ಭಾರತ) ಕೆಲವೆಡೆ ರಿಫಾರ್ಮೇಶನೂ (Reformation) (ಯೂರೋಪ) ತಲೆದೋರಿದವು. ಹಾಗಾಗಿ ಈ ಕಾಲವೂ ಯುಗಾಂತರಕಾರಿಯಾಯಿತು. ಆಧುನಿಕ ಕಾಲದ ಭಾರತವರ್ಷದಲ್ಲಿ ಮುಗಲ ವಂಶದ ಪತನ ಮೊದಲ್ಗೊಂಡು ಹಾಗೂ ಯೂರೋಪಿನಲ್ಲಿ ರೆನೆಸಾನ್ಸ್ (Renaissance) ಹಾಗೂ ರಿಫಾರ್ಮೇಶನ್‌ನ ಅನಂತರ ಪ್ರಾರಂಭವಾಗಿ ಸಂಕ್ರಮಣಕಾಲವಾಗಿ ನಡೆಯಿತು. ಈ ಕಾಲದಲ್ಲಿ ಪುನಃ ಅನೇಕಾನೇಕ ಮನಿಷಿಗಳು ಜನ್ಮವೆತ್ತಿದರು, ಹೊಸ ಪರಿವರ್ತನೆಗಳಿಗೂ ನವೀನ ರಚನೆಗಳಿಗೂ ಯೋಜನೆಗಳನ್ನು ಕಟ್ಟಿದರು. ಈ ಬಾರಿಯ ಯೋಜನೆಗಳಲ್ಲಿ ಪ್ರಾಚೀನ ಮತ್ತು ಮಧ್ಯಯುಗದ ಸುಧಾರಣೆಯ ಸ್ವರಗಳು ಮುಖ್ಯವಾಗಿದ್ದುದಲ್ಲದೆ ಸ್ವಾತಂತ್ರ್ಯ ಸಂದೇಶವೂ ಅವುಗಳಲ್ಲಿ ಸೇರಿಕೊಂಡಿತು.

ಇಂತಹ ಮನೀಷಿಗಳಲ್ಲಿಯೇ ಮಾರ್ಟಿನ್ ಲೂಥರ್ ಮತ್ತು ಮಹರ್ಷಿ ದಯಾನಂದ ಸರಸ್ವತಿಯವರು ಬರುತ್ತಾರೆ. ಮೊದಲನೆಯವರು ಮಧ್ಯಯುಗದಲ್ಲಿ ಯೂರೋಪಿನ ಪ್ರಬಲ ಸ್ತಂಭವಾಗಿದ್ದು ಎರಡನೆಯವರು ಆಧುನಿಕ ಭಾರತ ನಿರ್ಮಾಣಕರ್ತರಲ್ಲಿ ಸರ್ವಾಧಿಕ ತೇಜಸ್ವೀ ಪ್ರಖರ ಕ್ರಾಂತಿಕಾರೀ ನಿರ್ಮಾಣಕರ್ತರಾಗಿದ್ದರು. ಒಬ್ಬರು ಪೋಪರ ಅಧಿನಾಯಕವಾದಕ್ಕೆ ವಿರುದ್ಧ ಮುಕ್ತಿಯ ಧರ್ಮ ತುತೂರಿಯನ್ನು ಊದಿದ್ದರೆ ಇನ್ನೊಬ್ಬರು ಬ್ರಾಹ್ಮಣ್ಯವಾದ ಹಾಗೂ ವಿದೇಶೀ ಶಾಸನ ತಂತ್ರಕ್ಕೆ ವಿರುದ್ಧ ಸ್ವಾತಂತ್ರ್ಯ ಜಯಘೋಷವನ್ನು ಮೊಳಗಿದರು. ಇಬ್ಬರೂ ತಮ್ಮ ತಮ್ಮ ಯುಗದ ಲೋಕನಾಯಕರೂ, ಸಾಧಕರೂ ಆಗಿದ್ದು ಸ್ವಭಾಷೆಗಳ ಅಪ್ರತಿಮ ವಿದ್ವಾಂಸರಾಗಿದ್ದರು, ಯೋಧ್ಧಾರರಾಗಿದ್ದರು. ಒಬ್ಬರು ರೈನ್ ನದಿಯ ಪ್ರವಾಹವನ್ನು ತಿರುಗಿಸಲೆಳಸಿದರೆ ಇನ್ನೊಬ್ಬರು ಗಂಗಾನದಿಯ ಪ್ರವಾಹವನ್ನು ವಿದೇಶೀಯರೆಂಬ ಅಸ್ಪೃಶ್ಯರ ಸಂಪರ್ಕದಿಂದ ಬೇರಾಗಿಸಿಟ್ಟು ಪವಿತ್ರವಾಗಿರಿಸಬಯಸಿದ್ದರು. ಇಬ್ಬರೂ ಜೀವಂತ ಜೀವ ಜೀವಾಳವಾಗಿದ್ದು ಪ್ರಖರವಾಗಿದ್ದರು. ಲೂಥರರು ಅಗ್ನಿತಪ್ತರಾಗಿಯೂ, ಧರ್ಮ ಬಹಿಷ್ಕೃತರಾಗಿಯೂ ಬೈಬಲಿನ ಜ್ಯೋತಿಯನ್ನು ಬೆಳಗಿಸಿದರು. ದಯಾನಂದರು ವಿಷಪಾನ ಮಾಡಿಯೂ ವೇದದ ಅಮರತ್ವ ಹಾಗೂ ಸ್ವರಾಜ್ಯದ ಶಾಶ್ವತ ಸಂದೇಶ

ವನ್ನು ಸಾರಿದರು. ಇಬ್ಬರೂ ಮಿಥ್ಯಾಧರ್ಮದ ಶಲ್ಯಚಿಕಿತ್ಸೆಗೈದು ಪೋಪರ ಹಾಗೂ ಪಂಡಿತರ ಅಧಿಕಾರ ಶೂನ್ಯವಾದ ನವೀನ ಸಮಾಜರಚನೆಯ ಪ್ರಾರೂಪವನ್ನಿತ್ತರು. ಇಬ್ಬರೂ ಯುಗ ನಿರ್ಮಾತರು ಹಾಗೂ ಕಾಲಜಯಿಯಾಗಿದ್ದರು.

ಮಾರ್ಟಿನ್ ಲೂಥರ ಹಾಗೂ ಮಹರ್ಷಿ ದಯಾನಂದ–ಇಬ್ಬರ ಜೀವನ, ಉದ್ದೇಶ್ಯ ಹಾಗೂ ಕಾರ್ಯಗಳಲ್ಲಿ ಬಹಳಷ್ಟು ಸಮಾನತ್ವ ಕಂಡುಬರುತ್ತದೆ. ಇಬ್ಬರೂ ಒಂದೇ ಪಾರಿವಾರಿಕ ಪರಿವೇಶದಲ್ಲಿ ಹುಟ್ಟಿ ಬೆಳೆದು ಆ ಪರಿವೇಶಗಳಿಂದ ಸರ್ವಥಾ ಮುಕ್ತರಾಗಿದ್ದರು. ಪರಿವಾರ ಪರಂಪರೆಯನ್ನಾಗಲೀ, ಅಭಿಭಾವಕರ ಆದೇಶಗಳನ್ನಾಗಲೀ ಇಬ್ಬರ ಬಂಡಾಯವಾದೀ ಮನಸ್ಸುಗಳು ಅಂಗೀಕರಿಸಲಿಲ್ಲ. ಲೂಥರರು ತನ್ನ ತಂದೆಯ ಆದೇಶಗಳನ್ನು ಅಂಗೀಕರಿಸಿದಲ್ಲಿ ಅವರು ಬರೇ ವಕೀಲರಾಗುತ್ತಿದ್ದರು. ಆದರೆ, ಆತ ವಕೀಲರಾಗಿ ಅನುಚಿತ ನಿರ್ಣಯಗಳನ್ನೀಯುವ ಪೋಪರ ಕಚೇರಿಯಲ್ಲಿ ಕೆಲಸಮಾಡಲು ಸಿದ್ಧರಾಗಲಿಲ್ಲ. ಅಪರಾಧ ಭಾವನೆಯಿಂದ ಆತನ ಮನಸ್ಸು ಕಳವಳಗೊಂಡು ಆತ ತನ್ನ ತಾಯಿ ತಂದೆಗಳ ವಿರುದ್ಧ ಮಠವಾಸಿಯಾಗಲು ನಿಶ್ಚಯ ಮಾಡಿ ಮಾನಸಿಕ ಹಾಗೂ ಆಧ್ಯಾತ್ಮಿಕ ಶಾಂತಿಯನ್ನು ಪಡೆಯಲೋಸುಗ ದೃಢವಾಗಿ ಉಪವಾಸವನ್ನು, ಪ್ರಾರ್ಥನೆಯನ್ನು ಮಾಡಿದನು. ಆದರೆ, ಆವರಿಗೆ ಶಾಂತಿಯು ಅವುಗಳಿಂದ ದೊರೆಯದೆ ಈಶ್ವರನು ಸ್ನೇಹಪೂರ್ಣ ತಂದೆಯಾಗಿದ್ದು ಪ್ರತಿಯೊಬ್ಬ ವಿಶ್ವಾಸವನ್ನು ತರುವ ಭಕ್ತನಿಗೆ ಮುಕ್ತಿಯನ್ನೀಯುತ್ತಾನೆಂಬ ವಿಚಾರದಿಂದ ಸಿಕ್ಕಿತು.

ಇದೇ ರೀತಿಯ ಬಾಲ್ಯವನ್ನು ಮೂಲಶಂಕರ (ದಯಾನಂದ)ರೂ ಕಳೆದರು. ಅವರು ಪರಿವಾರ ಪರಂಪರೆಯನ್ನು ಹೊಂದಿಕೊಂಡು ಶಿವರಾತ್ರಿಯ ದಿನ ತಂದೆಯ ಅಪ್ಪಣೆಯನ್ನು ಪಾಲಿಸಿ ಧರ್ಮಭೀರು ಹಾಗೂ ರೂಢಿವಾದಿಯಾಗಿದ್ದ ಪಕ್ಷದಲ್ಲಿ ಮೂಲ ಶಂಕರನೆಂಬ ಶೈವನೇನೊ ಆಗಿರುತ್ತಿದ್ದು ದಯಾನಂದರಾಗುತ್ತಿದ್ದಿಲ್ಲ. ಲೂಥರರು ಮಠದಲ್ಲಿ ಕುಳಿತು ಮನನ ಮಾಡಿದರು. ದಯಾನಂದರು ಮಾರ್ಗದಲ್ಲಿ ಮನನ ಮಾಡುತ್ತಾ ಕೊನೆಗೆ ಸದ್ಗುರು ಸೇವೆಯನ್ನೆಸಗಿ ಅಮರವೇದ ಜ್ಞಾನವನ್ನು ಪಡೆದು ದೇಶದ ಜನತೆಯ ಜೀವನ ಪರಿವರ್ತನೆ ವೆಸಗುವ ಸಂಕಲ್ಪಗೈದರು. ಲೂಥರರ ದೇವರು ಎಲ್ಲಾ ಮಾನವರ ಮೇಲೆ ಸ್ನೇಹದ ಮಳೆಗರೆಯುತ್ತಿದ್ದರೆ ದಯಾನಂದರ ಈಶ್ವರನು ಸವರ್ಣ–ಅಸವರ್ಣರೆನ್ನದೆ ಎಲ್ಲರ ತಂದೆಯಾಗಿದ್ದನು.

ಈ ಇಬ್ಬರು ಕ್ರಾಂತಿಕಾರರ ಕಾಲಗಳೂ ನಿರಾಪದವಾಗಿರದೆ ಅವರಿಗೆ ಪ್ರತಿಕೂಲವಾಗಿದ್ದು, ಕ್ರಾಂತಿಕಾರೀ ವಿಚಾರಗಳಿಗೆ ವಿರುದ್ಧವಾಗಿದ್ದವು. ಲೂಥರರು ರೋಮದ ಪೋಪರಿಂದ ನಿರ್ಮಿತವಾದ ಅನುಗ್ರಹ ಪತ್ರ (Indulgence) ಕ್ಕೆ ವಿರುದ್ಧ ತಮ್ಮ 95 ವಿಚಾರಗಳ ಘೋಷಣೆ ಮಾಡಿದಾಗ ರಾಜನಾದ ಚಾರ್ಲ್ಸ್ ಪಂಚಮ ಹಾಗೂ ಪೋಪರು ಡಾಯಟ್ (Diet) ಸಭೆ ಸೇರಿದಾಗ ಅವರನ್ನು ಧರ್ಮ ದ್ರೋಹಿಯೆಂದು ಘೋಷಿಸಿ ಆತನನ್ನು ಧರ್ಮ ಬಹಿಷ್ಕೃತರನ್ನಾಗಿ ಮಾಡಿದನು. ಆದರೆ, ಪರಿಣಾಮಕ್ಕೆ ಹೆದರದೆ ಲೂಥರರು ತಮ್ಮ ಮಂತವ್ಯಗಳ ಹಾಗೂ ತಮ್ಮ ವಕ್ತೃತ್ವ ಕಲೆಯ, ತಮ್ಮ ಅಕಾಟ್ಯ ತರ್ಕಗಳ ಆಧಾರದ ಮೇಲೆ ಬಂದು ಕೆಥೋಲಿಕ್ ವಾದದ ನಗ್ನತೆಯನ್ನು ಬಯಲು ಪಡಿಸಿದರು. ಚರ್ಚಿನ ಭ್ರಷ್ಟಾಚಾರವನ್ನು ಬಹಿರಂಗಗೊಳಿಸಿ ಚರ್ಚ್ ಜಗತ್ತಿನಲ್ಲೇಳುವ ಬಿರುಗಾಳಿಗೆ ಜನ್ಮವಿತ್ತರು.

ಮಹರ್ಷಿ ದಯಾನಂದರ ಕಾಲವು ಆದಕ್ಕಿಂತಲೂ ಹೆಚ್ಚು ಸಂಕಟಗ್ರಸ್ತವಾಗಿತ್ತು. ಲೂಥರರಿಗಂತೂ ಚರ್ಚ್ ಎಂಬ ಒಂದೇ ಒಂದು ಪ್ರಮುಖ ಶಕ್ತಿಯನ್ನೆದುರಿಸಬೇಕಾಗಿತ್ತು. ದಯಾನಂದರಿಗಾದರೋ ನಾಲ್ಕೂ ದಿಕ್ಕುಗಳಿಂದಾಗುವ ಆಕ್ರಮಣಗಳನ್ನೂ, ವಿರುದ್ಧ ಶಕ್ತಿಗಳನ್ನೂ ಎದುರಿಸಬೇಕಾಗಿ ಬಂತು. ದೇಶದ ಪ್ರಚಲಿತ ಪರಂಪರೆ, ಬ್ರಾಹ್ಮಣಧರ್ಮ, ವಿದೇಶೀ ಶಾಸನ ಹಾಗೂ ಆ ಶಾಸನದಿಂದಾಗಿ ಚೂರು ಚೂರಾಗಿ ವಿಘಟಿತವಾಗುತ್ತಿರುವ ಭಾರತೀಯ ಸಮಾಜ, ಹಾಗೂ ಸಮಾಜದ ಅಭಿಜಾತವರ್ಗ ಮೊದಲಾದ ಅನೇಕ ವಿರೋಧೀ ತತ್ತ್ವಗಳನ್ನು ಸದೆಬಡಿದೇ ದಯಾನಂದರು ಸಾಂಸ್ಕೃತಿಕ ಪುನರ್ಜಾಗರಣ ಮತ್ತು ಅನಂತರ ರಾಜನೀತಿಕ ಸ್ವಾತಂತ್ರ್ಯದ ಪೃಷ್ಠ ಭೂಮಿಯ ನಿರ್ಮಾಣ ಮಾಡಬೇಕಾಗಿತ್ತು. ನೂರಾರು ವರ್ಷಗಳಿಂದ ಬೇರೂರಿದ ಬ್ರಾಹ್ಮಣ್ಯವಾದನನ್ನೂ, ಅದರ ಪ್ರಭಾವವನ್ನೂ ಮುಗಿಸುವುದು ಕಷ್ಟದ ಕಾರ್ಯವಾಗಿತ್ತು.

ಮನೆಯಲ್ಲಿ ಹೊಕ್ಕು ಆಳವಾಗಿ ಬೇರೂರಿದ ಇಸ್ಲಾಮನ್ನು ಕಿತ್ತೆಸೆಯುವುದು ಸರಳವಾಗಿರಲಿಲ್ಲ. ಏಳು ಸಮುದ್ರಗಳಾಚೆಯಿಂದ ಭಾರತ ಭೂಮಿಗೆ ಬಂದ ಕ್ರೈಸ್ತ ಮತದ ಬೀಜವೊಂದು ಮರದ ರೂಪ ತಾಳಿಕೊಂಡಿದ್ದು ಆದರ ಉನ್ನತಿಗಾಗಿ ವಿದೇಶಿ ರಾಜ್ಯ ಹವಣಿಸುತ್ತಿದ್ದುದರಿಂದ ಅದನ್ನು ವಿರೋಧಿಸುವುದೂ ದುಷ್ಕರವಾಗಿತ್ತು. ಇದಲ್ಲದೆ, ಆಂಗ್ಲೇಯರು ತಮ್ಮ ರಕ್ಷಣೆ ಹಾಗೂ ಅಕ್ಷುಣ್ಣತೆಗಾಗಿ ಪಾಶ್ಚಿಮಾತ್ಯ ಸಭ್ಯತಾ ಭಾಷೆಗಳಲ್ಲಿ ಹುಟ್ಟಿ ಬೆಳೆದ ಒಂದು ಸಮೂಹವನ್ನು ಕಟ್ಟಿಕೊಂಡಿದ್ದರು. ಅದರ ಸದಸ್ಯರು ತಮ್ಮನ್ನು ಸಾಮಾನ್ಯ ಭಾರತೀಯರಿಗಿಂತ ಹೆಚ್ಚು ಸಮ್ಮಾನಯುಕ್ತ ಹಾಗೂ ಗೌರವಾನ್ವಿತರೆಂಬ ಮಿಥ್ಯಾ ಅಹಮ್ಮನ್ಯತೆಗೆ ಸಿಲುಕಿ ಬೇರೆಯೇ ಇರತೊಡಗಿದ್ದರು. ಈ ಸಮೂಹದವರನ್ನು ಪ್ರಭಾವಕ್ಕೊಳಪಡಿಸಿ ಅವರಿಗೆ ಸ್ವದೇಶ, ಸ್ವರಾಜ್ಯ ಹಾಗೂ ಸ್ವಧರ್ಮದ ಪಾಠ ಕಲಿಸುವುದು ಕಠಿಣವಾಗಿತ್ತು. ಸಂಕ್ಷೇಪವಾಗಿ ಹೇಳಬೇಕಾದರೆ, ದೇಶದ ಸಾಮಾಜಿಕ, ಧಾರ್ಮಿಕ ಹಾಗೂ ರಾಜನೀತಿಕ ರಾಷ್ಟ್ರೀಯತೆಯು ಮೇಲೆ ಹೇಳಿದ ವಿಘಟನಕಾರೀ ತತ್ತ್ವಗಳಿಗೆ ಬಲಿಬಿದ್ದು ನುಚ್ಚುನೂರಾಗಿ ಹೋಗಲು ಸಿದ್ಧವಾಗಿತ್ತು. ಅದನ್ನು ರಾಷ್ಟ್ರೀಯತಾ ಸಂದೇಶವೆಂಬ ಸಿಮೆಂಟಿನಿಂದ ಜೋಡಿಸಿ ವಿಶಾಲವಾದೊಂದು ಬಂಡೆಯ ರೂಪ ಕೊಡುವುದು ಆವಶ್ಯಕವಾಗಿತ್ತು. ಈ ಭಾರತೀಯ ನಿರ್ಮಾತನಿಗೆ ಜರ್ಮನ್ ಯೋದ್ಧಾರನಿಗಿಂತ ಹೆಚ್ಚು ಕಷ್ಟಪಡಬೇಕಾಗಿತ್ತು. ಹೆಚ್ಚು ಸಂಘರ್ಷ ಮಾಡುತ್ತಾ ಹೆಚ್ಚು ಹಾಲಾಹಲ ವಿಷವನ್ನುಣ್ಣಬೇಕಾಗಿತ್ತು.

ಇಬ್ಬರೂ ಮೀಮಾಂಸಕರಿಗೆ ತಮ್ಮ ತಮ್ಮ ಉದ್ದೇಶ್ಯಸಾಧನೆಯಲ್ಲಿ ಸಫಲತೆ ಸಿಕ್ಕಿತು. ಇಬ್ಬರೂ ತಮ್ಮ ವಿರೋಧೀ ಶಕ್ತಿಗಳೊಂದಿಗೆ ಸೆಣಸಿದ್ದರು. ಲೂಥರರು ತಮ್ಮ 95 ಅಭಿಮತಗಳನ್ನು ಮುದ್ರಿಸಿ ಯತ್ರ ತತ್ರ ಗೋಡೆಗಳಿಗೆ ಅಂಟಿಸಿದರು. ವಾದವಿವಾದಗಳ ಮೂಲಕ ತಮ್ಮ ವಿಚಾರಗಳ ಪ್ರಚಾರ ಮಾಡಿದರು. ಈಶ್ವರನ ಕೃಪೆಯೇ ಮುಕ್ತಿಯ ಏಕ ಮಾತ್ರ ಉಪಾಯವೆಂದು ಸಾರಿದರು. ಪ್ರತಿಯೊಬ್ಬನೂ ತನ್ನ ಅಂತಃಕರಣ ಮೂಲಕ ಬೈಬಲಿನ ವ್ಯಾಖ್ಯಾನವೆಸಗಬೇಕೇ ಹೊರತು ಪೋಪರ ಅಥವಾ ಪುರೋಹಿತರ ಸಹಾಯದಿಂದಲ್ಲವೆಂದು ಘೋಷಿಸಿದರು. "ಪ್ರಭುವೇ ನಮ್ಮ ಪ್ರಬಲ ದುರ್ಗವು" (A mighty fortress is our god) ಮೊದಲಾದ ಭಜನೆಗಳನ್ನು ಬರೆದರು. ಲೂಥರರ ಈ ವಿಚಾರಗಳು

ಪ್ರಜ್ವಲನಶೀಲ ಇಂಧನವನ್ನು ನಿರ್ಮಿಸಿದ್ದು ಯೂರೋಪಿನಲ್ಲಿ ಬೆಂಕಿ ಉರಿಯತೊಡಗಿತು. ಅಲ್ಲಿ ಧರ್ಮವಿದ್ರೋಹವೆದ್ದಿತು. ಪ್ರೊಟೆಸ್ಟೆಂಟ್ ಎಂಬ ವಿದ್ರೋಹವೇ ಅದಾಗಿತ್ತು. ಕೆಥೋಲಿಕ್ ಮತದಿಂದ ಬೇರಾಗಿ ಮಾರ್ಟಿನ್ ಲೂಥರರ ಧರ್ಮಸಿದ್ಧಾಂತಗಳನ್ನು ಅಂಗೀಕರಿಸಿದವರು ಪ್ರೊಟೆಸ್ಟೆಂಟ್ ಎನ್ನಿಸಿದರು. ಲೂಥರರ ಸಿದ್ಧಾಂತಗಳನ್ನಂಗೀಕರಿಸಿದ ಕೃಷಿಕರೂ ಸಾಮಂತರಿಗೆ ವಿರುದ್ಧ ಬಂಡಾಯವೆಬ್ಬಿಸಿದರು. ಮೆಲ್ಲಮೆಲ್ಲಗೆ ಪ್ರೊಟೆಸ್ಟೆಂಟ್ ಮತದ ವಿಸ್ತಾರ ಹೆಚ್ಚಿತು. 1700 ಇಸ್ವಿಯ ವರೆಗೆ ಜರ್ಮನಿಯ ಉತ್ತರದ ರಾಜ್ಯಗಳೂ ಅನಂತರ ಡೆನ್ಮಾರ್ಕ್, ನಾರ್ವೇ ಹಾಗೂ ಸ್ವೀಡನ್ ಈ ಮತವನ್ನು ಅಂಗೀಕರಿಸಿದವು.

ಇದೇ ರೀತಿ ಮಹರ್ಷಿ ದಯಾನಂದರಿಗೂ ತಮ್ಮ ಆಂದೋಳನವನ್ನು ಮುಂದೂಡಲು ಸಫಲತೆ ಸಿಕ್ಕಿತು. ಅವರು ಪ್ರಚಲಿತವಾದ ದೇಶೀ ವಿದೇಶೀ ಮತಗಳ ಪಾಷಂಡವಾದವನ್ನು ತೀವ್ರವಾಗಿ ಖಂಡಿಸಿ ರಾಷ್ಟ್ರ ಧರ್ಮದ ಸಿದ್ಧಾಂತವನ್ನು ಎತ್ತಿಹಿಡಿದರು. ಮೂರ್ತಿಪೂಜೆಯ ಸಿದ್ಧಾಂತವನ್ನು ಖಂಡಿಸಿದರು. ಜಾತಿಪದ್ಧತಿಯನ್ನು ವಿರೋಧಿಸಿದರು. ವೇದಮಹಿಮೆಯನ್ನು ಕೊಂಡಾಡಿದರು. ರಾಷ್ಟ್ರೀಯ ಶಿಕ್ಷಣದ ಧ್ವಜವನ್ನೆತ್ತಿ ಹಿಡಿದರು. ತಮ್ಮ ಉದ್ಧೇಶ್ಯ ಸಾಧನೆಗಾಗಿ ಅವರು ೧೮೭೫ರಲ್ಲಿ ಆರ್ಯಸಮಾಜವನ್ನು ಸ್ಥಾಪಿಸಿದರು. ವಿಶ್ವಇತಿಹಾಸದಲ್ಲಿ ಮಾರ್ಟಿನ್ ಲೂಥರ್ ಹಾಗೂ ದಯಾನಂದ ಸರಸ್ವತಿಯವರಿಗಿರುವ ಮಹತ್ವವೇ ಆಂದೋಳನದ ಇತಿಹಾಸದಲ್ಲಿ ಪ್ರೊಟೆಸ್ಟೆಂಟರ ಮತ್ತು ಆರ್ಯಸಮಾಜಗಳದಿದೆ. ಲೂಥರರು 'ಬೈಬಲಿನತ್ತ ಮರಳಿರಿ' ಎಂದರೆ ದಯಾನಂದರು 'ವೇದಗಳತ್ತ ಮರಳಿರಿ' ಎಂದು ಸಿದ್ಧಾಂತವನ್ನಿತ್ತರು. ಇದೆಲ್ಲ, ದಯಾನಂದರು ತಮ್ಮ ಸಮಸ್ತ ವಿಚಾರಗಳನ್ನು **ಸತ್ಯಾರ್ಥ ಪ್ರಕಾಶ**ದಲ್ಲಿ ಲಿಪಿಬದ್ಧಗೊಳಿಸಿದರು. ಇದನ್ನು ಆರ್ಯರ ಬೈಬಲ್ ಎನ್ನಬಹುದು.

ಆದರೆ, ದಯಾನಂದರ ವ್ಯಕ್ತಿತ್ವ ಹಾಗೂ ದರ್ಶನವು ಅನೇಕ ಸ್ಥಳಗಳಲ್ಲಿ ಲೂಥರರಿಗಿಂತ ಹೆಚ್ಚು ಪ್ರಭಾವಜನಕವೂ, ವಿಚಾರೋತ್ತೇಜಕವೂ ಆಗಿದೆ. ಲೂಥರರ ಕಾರ್ಯಕ್ಷೇತ್ರ ಸೀಮಿತವಾಗಿದ್ದು ದಯಾನಂದರ ಕಾರ್ಯಕ್ಷೇತ್ರ ಹೆಚ್ಚು ವ್ಯಾಪಕವಾಗಿತ್ತು. ಲೂಥರರು ಬೈಬಲವನ್ನು ಪೋಪರ ನಿಯಂತ್ರದಿಂದ ತಪ್ಪಿಸಿ ಧರ್ಮದಲ್ಲಿ ಮನೆಮಾಡಿಕೊಂಡಿರುವ ಕೇಡನ್ನು ದೂರಪಡಿಸುವ ಉದ್ದಿಶ್ಯವನ್ನು ಹೊಂದಿಕೊಂಡಿದ್ದರು. ದಯಾನಂದರ ಉದ್ಯೇಶ್ಯವು ವೇದಗಳ ಮೇಲಿರುವ ಬ್ರಾಹ್ಮಣರ ಏಕಾಧಿಕಾರವನ್ನು ಹೋಗಲಾಡಿಸುವುದು ಮಾತ್ರವಲ್ಲ. ಸಾಂಸ್ಕೃತಿಕ ಹಾಗೂ ಸಾಮಾಜಿಕ ಪುನರ್ಜಾಗರಣವನ್ನು ಮಾಡಿ ರಾಜನೀತಿಕ ಸ್ವಾತಂತ್ರ್ಯವನ್ನು ಕೊಡಿಸುವುದಾಗಿತ್ತು. ಲೂಥರರು ಬರೇ ಕ್ರಾಂತಿಕಾರೀ ಸುಧಾರಕರಾಗಿದ್ದು ಧರ್ಮಕ್ಷೇತ್ರದಲ್ಲಿಯೇ ಸುಧಾರಣೆಯನ್ನು ಅಪೇಕ್ಷಿಸಿದ್ದರು. ದಯಾನಂದರು ಸುಧಾರಕರೂ ಮಾತ್ರವಲ್ಲ, ರಾಜನೀತಿಕ ಚಿಂತಾಜನಕರೂ ಆಗಿದ್ದುದರಿಂದ **ಸುರಾಜ್ಯ**ದ ಬದಲು ಸ್ವರಾಜ್ಯವನ್ನೇ ಮೇಲೆಂದು ತಿಳಿದಿದ್ದರು. ಅವರ ವಿಚಾರಗಳ ದೂರಗಾಮೀ ಪ್ರಭಾವಬಿತ್ತು. ಭಾರತದ ರಾಷ್ಟ್ರೀಯ ಆಂದೋಳನದಲ್ಲಿ ತಲೆಯೆತ್ತಿದ ಉಗ್ರವಾದಿಗಳ ದಳವು ದಯಾನಂದರ ಉಗ್ರವಿಚಾರಗಳಿಂದಲೇ ಪ್ರಭಾವಿತವಾಗಿತ್ತು. ಮಾತ್ರವಲ್ಲ, ದಯಾನಂದರಲ್ಲಿದ್ದ ಪ್ರಖರತೆ, ಓಜಸ್ವಿತೆ, ಮೀಮಾಂಸಾಶಕ್ತಿ ಹಾಗೂ ತೇಜಸ್ವಿತೆ ಮಾರ್ಟಿನ್ ಲೂಥರರಲ್ಲಿರಲಿಲ್ಲ. ತಮ್ಮ ವಿಚಾರಗಳಲ್ಲಿ ಧಾರ್ಷ್ಟ್ಯವನ್ನು ಹೊಂದಿದ ಲೂಥರರನ್ನು ಭಾರತದ ಕಬೀರದಾಸರಿಗೆ ಹೋಲಿಸಬಹುದು. ದಯಾನಂದ ಜೀವನ ಹಾಗೂ ವ್ಯಕ್ತಿತ್ವ—ಇವೆರಡೂ ಬಹು ಉಚ್ಚಮಟ್ಟದ್ದಾಗಿದ್ದವು.

---

# ಧರ್ಮದ ಎದುರಿನಲ್ಲಿರುವ ಸವಾಲನ್ನು ಹೇಗೆ ಎದುರಿಸೋಣ?

● ಸ್ವಾಮೀ ಸತ್ಯಪ್ರಕಾಶ ಸರಸ್ವತೀ

(೧೬ರಿಂದ ೨೦ ನವಂಬರ ೧೯೮೧ ವರೆಗೆ ಎರ್ನಾಕುಳಂ (ಕೊಚ್ಚಿ)ಯಲ್ಲಿ ವಿಭಿನ್ನ ಧರ್ಮಗಳನ್ನು ಪ್ರತಿನಿಧಿಸುವ ವ್ಯಕ್ತಿಗಳ ಒಂದು ವಿಶಿಷ್ಟ ಗೋಷ್ಠಿ ನಡೆಯಿತು. **ಮನುಷ್ಯ ಮತ್ತು ಧರ್ಮಗಳು** ಎಂದಿತ್ತು ಆ ಗೋಷ್ಠಿಯ ವಿಷಯ. ಯೂರೋಪ, ಅಮೆರಿಕಾ ಹಾಗೂ ಏಶ್ಯಾ ದೇಶಗಳ ಸುಮಾರು ಎರಡು ನೂರಕ್ಕಿಂತ ಹೆಚ್ಚು ಪ್ರತಿನಿಧಿಗಳು ಅದರಲ್ಲಿ ಪಾಲ್ಗೊಂಡರು. ಮುಖ್ಯವಾಗಿ ಆ ಗೋಷ್ಠಿಯು ರೋಮನ್ ಕೆಥೊಲಿಕರ ಪ್ರೇರಣೆಯಿಂದ ನಡೆದಿದ್ದು ಅದರಲ್ಲಿ ಹಿಂದೂ, ಮುಸ್ಲಿಂ, ಬೌದ್ಧ ಕ್ರೈಸ್ತ, ಜೈನ ಮತ್ತು ಇತರ ಮತಾವಲಂಬಿಗಳು ಬಂದಿದ್ದರು. ಅಲಹಾಬಾದ ಡಿವಿಜನಿನ ಬಿಶಪರ ವಿಶೇಷ ಆಗ್ರಹವನ್ನು ಮನ್ನಿಸಿ ಸ್ವಾಮೀ ಸತ್ಯಪ್ರಕಾಶ ಸರಸ್ವತಿ-ಅಲಹಾಬಾದ ವಿಶ್ವವಿದ್ಯಾಲಯದ ರಸಾಯನ ಶಾಸ್ತ್ರದ ನಿವೃತ್ತ ಪ್ರೊಫೆಸರ್-ಅವರು ೧೯ ನವಂಬರಕ್ಕೆ ಆದಿಶಂಕರಾಚಾರ್ಯರ ಜನ್ಮಭೂಮಿಯಾದ ಕಾಲಡಿಯಲ್ಲಿ ಕೊಟ್ಟ ಇಂಗ್ಲೀಷ್ ಭಾಷಣದ ಕನ್ನಡ ಅನುವಾದ)

ಅಖಿಲ ವಿಶ್ವ ಧರ್ಮ ಸಮ್ಮೇಳನದ ಅಧಿಕಾರಿಗಳು ನನ್ನನ್ನಿಲ್ಲಿ ಭಾಷಣ ಮಾಡಲಿಕ್ಕಾಗಿ ಆಮಂತ್ರಿಸುವ ಕೃಪೆದೋರಿರುವರು. ನಿಜವಾಗಿ ಹೇಳಬೇಕಾದರೆ ಮನುಷ್ಯನ ಒಂದು ಸ್ವಾಭಾವಿಕ ಧರ್ಮವಿದೆ. ಅದನ್ನು ನಾವು ಮಾನವ ಧರ್ಮವೆಂದು ಕರೆಯುತ್ತೇವೆ. ಹಲವೇಳೆ ನಾವದನ್ನು ಬರೇ ಧರ್ಮವೆಂದು ಕರೆಯಬಯಸುತ್ತೇವೆ. ಅದೇ ಈಶ್ವರೀಯ ಧರ್ಮವೂ ಆಗಿದೆ. ಅದನ್ನೇ ನಮ್ಮ ಪೈಕಿ ಬಹು ಮಂದಿ ವೈದಿಕ ಧರ್ಮವೆಂದು ಕರೆಯುತ್ತಾರೆ. ಈ ವಿಷಯವಾಗಿ ನನ್ನ ಅಭಿರುಚಿಯು ಬಹು ವರ್ಷಗಳಿಂದ ಬೆಳೆದು ಬಂದುದರಿಂದಲೇ ನಾನು ಇದರಲ್ಲಿ ಪಾಲ್ಗೊಂಡಿದ್ದೇನೆ. ನಾನು ನನ್ನ ಭಾಷಣದಲ್ಲಿ ಮುಕ್ತರೂಪವಾಗಿ ವಿಚಾರಗಳನ್ನು ಪ್ರಕಟಿಸಬಹುದೆಂಬ ಸ್ವಾತಂತ್ರ್ಯ ತಾವು ನನಗಿತ್ತಿರುವುದರಿಂದ ನನಗೆ ಯಾವ ರೀತಿಯ ಸಂಕೋಚವೂ ಆಗಲಾರದು. ನಾನು ತಮ್ಮ ಅಭಿರುಚಿಗೊಳಪಟ್ಟಿರುವ ಒಂದು ವಿಷಯವನ್ನೇ ಆರಿಸಿಕೊಳ್ಳಬಯಸುತ್ತೇನೆ. ನಾನು ಆತ್ಮೀಯತಾ ಪೂರ್ವಕ ನನ್ನ ಅನುಭವಗಳನ್ನೂ, ವಿಚಾರಗಳನ್ನೂ ಸ್ವಲ್ಪ ಸಮಯದಲ್ಲಿ ಬಯಲುಪಡಿಸಬೇಕೆಂದು ಕೋರಿರುವಿರಿ. ಇಲ್ಲಿ ಸೇರಿರುವ ಜನರ ಪೈಕಿ ಸಾಧಾರಣವಾಗಿ ಎಲ್ಲರೂ ಬೇರೆ ಬೇರೆ ಪರಿಸ್ಥಿತಿಗಳಲ್ಲಿಯೂ, ಪ್ರಭಾವಗಳಲ್ಲಿಯೂ ಹುಟ್ಟಿ ಬೆಳೆದಿರುವರು. ಆದುದರಿಂದ ಪರಸ್ಪರ ಮತ ಭಿನ್ನತೆಯಿರುವುದು ಸ್ವಾಭಾವಿಕವೇ ಆಗಿದೆ. ಇಂದು ಎಲ್ಲರ ಎದುರಿನಲ್ಲಿ ಹೊಸ ಸವಾಲುಗಳಿವೆ. ಸಮಯಕ್ಕೆ ಹೊಂದಿಕೊಳ್ಳುವಂತೆ ಆ ಎಲ್ಲಾ ಸವಾಲುಗಳಿಗೆ ಸರಿಯಾದ ಸಮಾಧಾನವನ್ನು ಕಂಡುಹಿಡಿಯಲು ಪ್ರಯಾಸ ಪಡುತ್ತಾರೆ.

ಮೊದಲು ನಾನು ನನ್ನ ಮಾತನ್ನೇ ಹೇಳುತ್ತೇನೆ. ನಾನು ಬಾಲ್ಯದಿಂದ ಕಳೆದ ಜೀವನದ ವಿಷಯದಲ್ಲಿ ನನಗೇನೂ ಅಸಂತೋಷವಿಲ್ಲ. ಒಬ್ಬ ಅಧ್ಯಾಪಕರ ಮನೆಯಲ್ಲಿ ಹುಟ್ಟಿದೆ. ನನ್ನ ಪೂಜ್ಯ ತಂದೆಯವರು ತನ್ನ ಮತ್ತು ಈಶ್ವರನ ಮೇಲಿನ ವಿಶ್ವಾಸದಿಂದ ತನ್ನ ಮಾರ್ಗವನ್ನು ಪ್ರಶಸ್ತ ಪಡಿಸಿದರು. ನವ ಯುವಕರಾಗಿದ್ದಾಗಲೇ ಅವರು ಆರ್ಯಸಮಾಜದೊಡನೆ ಸಂಬದ್ಧರಾದರು. ಆರ್ಯ ಸಮಾಜವೊಂದು ಕ್ರಾಂತಿಕಾರೀ ಆಂದೋಳನವಾಗಿದ್ದು

ಆದರ ಪ್ರವರ್ತಕರು ಮಹರ್ಷಿ ದಯಾನಂದರಾಗಿದ್ದರು. ಅವರು ೧೮೭೫ರಲ್ಲಿ ಸ್ಥಾಪಿಸಿ ೧೮೮೩ ರಲ್ಲಿ ದೈವಾಧೀನರಾದರು. ಆರ್ಯ ಸಮಾಜವು ತನ್ನ ಪ್ರಾರಂಭದಿಂದಲೇ ಕರ್ಮಠ ಸಂಸ್ಥೆ ಯಾಗಿದ್ದು ಒಂದೆಡೆ ಪ್ರಾಚೀನತಮ ವೈದಿಕ ಸಿದ್ಧಾಂತಗಳ ಪೋಷಣ ಮಾಡುತ್ತಾ ಇನ್ನೊಂದೆಡೆ ದುರಾಗ್ರಹ ಮತ್ತು ಎಲ್ಲಾ ವಿಧವಾದ ಅಂಧ ವಿಶ್ವಾಸಗಳ ದುಷ್ಪರಿಣಾಮಗಳತ್ತ ನಮ್ಮ ಗಮನ ಹರಿಸಿತು. ಆರ್ಯ ಸಮಾಜವು ಪಾಶ್ಚಾತ್ಯ ದೇಶಗಳಿಂದ ನಮ್ಮ ದೇಶಕ್ಕೆ ಬರುವ ವಿಜ್ಞಾನವನ್ನೂ, ಉದ್ಯೋಗಗಳನ್ನೂ ಸ್ವಾಗತಿಸಿತು. ಏಕೆಂದರೆ, ಭಾರತದ ಅತ್ಯಂತ ಪ್ರಾಚೀನ ಕಾಲವು ಆ ಕಾಲದ ವೈಜ್ಞಾನಿಕ ವಿಚಾರಗಳನ್ನು ಆಧಾರವಾಗಿ ಪಡೆದಿರುವುದೇ ಆದಕ್ಕೆ ಕಾರಣವಾಯಿತು. ಪ್ರಾಚೀನ ಭಾರತವು ತನ್ನ ಗೌರವಮಯ ಇತಿಹಾಸದಲ್ಲಿ ವಿಜ್ಞಾನ ಮತ್ತು ಉದ್ಯೋಗಗಳನ್ನು ಜೀವನದ ಅವಲಂಬನವಾಗಿ ತೆಗೆದುಕೊಂಡಿತ್ತು. ವಿಜ್ಞಾನ ಮತ್ತು ವಿಜ್ಞಾನವನ್ನು ಅವಲಂಬಿಸಿಕೊಂಡಿರುವ ಉದ್ಯೋಗಗಳು ರೂಢಿವಾದ ಮತ್ತು ಅಂಧ ವಿಶ್ವಾಸಗಳನ್ನು ಹೊಡೆದೋಡಿಸಲು ಸಹಾಯಕವಾಗುವವೆಂದು ಮಹರ್ಷಿ ದಯಾನಂದರ ಹಾಗೂ ಆರ್ಯ ಸಮಾಜದ ದೃಢ ನಂಬಿಕೆಯಾಗಿತ್ತು. ಪರಮಾತ್ಮನ ಈ ಸೃಷ್ಟಿ ನಮಗೆ ಹಿತಕಾರಿಯಾಗಿದ್ದು ಇದರ ರಚನೆಯು ದಿವ್ಯ ಉದ್ದೇಶ್ಯಗಳಿಂದ ಪರಿಪುಷ್ಟವಾಗಿದೆ. ವಿಜ್ಞಾನದ ಮೂಲಕ ನಮಗೆ ಸತ್ಯ ಸಿದ್ಧಾಂತಗಳ ಪರಿಚಯವಾಗುವುದು ಮಾತ್ರವೇ ಅಲ್ಲ ಈ ಆಧಾರವು ಆಧ್ಯಾತ್ಮಿಕ ತತ್ತ್ವಗಳನ್ನೂ ಪೋಷಿಸುವುದು. ಈ ಸೃಷ್ಟಿ ನಮಗೆ ಹಿತಕರವಾಗಿದ್ದು ಪರಮಾತ್ಮನ ಕಡೆಯಿಂದ ನಮಗೊಂದು ಬೌದ್ಧಿಕ ಪರಂಪರೆ ಸಿಕ್ಕಿದೆ. ನಾನು ವಿದ್ಯಾಲಯದಲ್ಲಿಯೂ ವಿಶ್ವವಿದ್ಯಾಲಯದಲ್ಲಿಯೂ ವಿಜ್ಞಾನದ ಅಧ್ಯಯನ ಮಾಡಿದೆ. ೧೯೬೭ ರಲ್ಲಿ ಅಲಹಾಬಾದ್ ವಿಶ್ವವಿದ್ಯಾನಿಲಯದಿಂದ ರಸಾಯನ ಶಾಸ್ತ್ರದ ಅಧ್ಯಕ್ಷ ಪದವಿಯಿಂದ ನಿವೃತ್ತನಾಗಿದ್ದೇನೆ. ನಾನು ಮಹಾತ್ಮಾ ಗಾಂಧೀಜೀಯಂತಹ ಮಹಾ ಮಾನವನ ಹಾಗೂ ಐನ್‌ಸ್ಟಾಯಿನ್‌ನಂತಹ ಮಹಾಚಿಂತನಕರ್ತನ ಜೀವನ ಕಾಲದಲ್ಲಿ ನಾನು ಅಧ್ಯಯನ–ಅಧ್ಯಾಪನಗಳನ್ನು ಮಾಡಿದೆನೆಂಬ ಹೆಮ್ಮೆ ನನಗಿದೆ. ೧೯೭೧ರಲ್ಲಿ ಸಂನ್ಯಾಸ ಸ್ವೀಕರಿಸಿ ಅಂದಿನಿಂದ ಸತ್ಯದ ಸಾಕ್ಷಾತ್ಕಾರವನ್ನು ಗೈದು ಸ್ವಲ್ಪವೇ ಆದರೂ ಚಿಂತೆಯಿಲ್ಲ, ಮಾನವನಾಗಲು ಪ್ರಯತ್ನಶೀಲನಾಗಿದ್ದೇನೆ.

## ಮನುಷ್ಯನಾಗುವುದೆಂದರೇನು ?

ಹೇ ಮಾನವ! 'ನೀನು ಮನುಷ್ಯನಾಗು' (ಮನುರ್ಭವ) ಎಂದು ಋಗ್ವೇದದ ಒಂದು ಮಂತ್ರ ಆದೇಶವೀಯುತ್ತಿದೆ. ನಾವು ನೀವು ಮತ್ತು ಇತರ ಸಮಸ್ತ ನರನಾರಿಯರು ಮಾನವ ಅಸ್ಥಿಪಂಜರದಲ್ಲಿ ಹುಟ್ಟಿರುವೆವಾದರೂ ಪುರುಷಾರ್ಥದಿಂದ ಮನುಷ್ಯರಾಗುವ ಕಾರ್ಯ ಇನ್ನೂ ಉಳಿದುಕೊಂಡಿದೆ. ನಮ್ಮಗಳ ವಿಸ್ತೃತ ಪರಿವಾರದಲ್ಲಿ ಅನ್ಯ ಪ್ರಾಣಿಗಳೂ ಇರುವವಾದರೂ ಅವು ಪುರುಷಾರ್ಥದ ಮೂಲಕ ಏನೂ ಆಗಬೇಕಾಗಿಲ್ಲ. ಹುಲಿಯು ಜನ್ಮತಃ ಹುಲಿಯಾಗಿದ್ದು ಕರ್ತವ್ಯ ನಿರ್ವಹಿಸಿ ಹುಲಿಯಾಗಬೇಕಾಗಿಲ್ಲ. ಈ ಮಾತು ಹಸು, ಆಡುಗಳಿಗೂ ಹೊಂದಿಕೊಳ್ಳುತ್ತದೆ. ನಿಜವಾಗಿ ಹೇಳಬೇಕೆಂದರೆ ಎಲ್ಲಾ ಪಶುಪಕ್ಷಿಗಳು ಜನ್ಮನಾ ಆಗಿವೆ. ಅವುಗಳಿಗೆ ಪುರುಷಾರ್ಥ ಅಗತ್ಯವಿಲ್ಲ. ಮಾನವನ ವಿಷಯ ಬೇರೆಯೇ ಆಗಿದೆ. ಅವನು ಜನ್ಮನಾ ಮನುಷ್ಯನಲ್ಲ. ತಿಂದುಂಡು ನಿದ್ದೆ ಹೋಗುವುದಕ್ಕೆ ನೀವು ಏನು ಬೇಕಾ

ದರೂ ಹೆಸರು ಕೊಡಿ. ಆದರೆ, ಇವನು ನಿಜವಾಗಿ ಮನುಷ್ಯನಾಗಬೇಕಾದರೆ ಶಿಕ್ಷಣ ಪಡೆದು, ದೀಕ್ಷಿತನಾಗಿ ಪುರುಷಾರ್ಥಗೈದು ಮನುಷ್ಯನಾಗಲು ಹವಣಿಸಬೇಕಾಗುತ್ತದೆ. **ಧರ್ಮ ಮತ್ತು ಮಾನವ** ಎಂಬ ವಿಷಯವು ಇಂದಿನ ಗೋಷ್ಠಿಗೆ ಬಹು ಮಹತ್ತ್ವದ್ದಾಗಿದೆ. ಹೆಸರಿಗೇನೋ ನಾವೆಲ್ಲ ಮಾನವರಾಗಿದ್ದೇವೆ. ಆದರೆ, ನಮ್ಮಲ್ಲಿ ಒಂದೆಡೆ ಹಲವರು ಶಿಕ್ಷಣ-ಸಂಸ್ಕೃತಿಗಳ ಗಾಳಿಯೂ ಸೋಂಕದ ಕಾಡು ಜನರಿದ್ದಾರೆ. ಇನ್ನೊಂದೆಡೆ ನಮ್ಮ ಪೈಕಿ ಕೆಲವು ತತ್ತ್ವವೇತ್ತರೂ, ಸುಸಭ್ಯರೂ, ಸುಸಂಸ್ಕೃತರೂ ಆದ ಋಷಿ ಮುನಿಗಳೂ, ಮಹರ್ಷಿಗಳೂ ಇದ್ದಾರೆ. ನಮ್ಮ ಪೈಕಿ ಪ್ರತಿಯೊಬ್ಬನೂ ದಿನಗಳು ಕಳೆದ ಹಾಗೆ ಏನಾದರೂ **ಆಗುತ್ತಿದ್ದಾನೆ.** ಆಗುತ್ತಿದ್ದಾನೆ ಎಂಬುದಕ್ಕೆ ಮೇಲೇರುವುದೆಂದೂ, ಕೆಳಗೆ ಬೀಳುವುದೆಂದೂ ಅರ್ಥವಾಗುತ್ತದೆ. ವ್ಯಕ್ತಿ ಸಮಾಜಗಳೆರಡೂ ಕೆಳಗೆ ಬೀಳುವುದಲ್ಲ, ಮೇಲೇರಬೇಕೆಂದು ಮನುಷ್ಯರಾಗಬೇಕೆಂದು ಇಚ್ಛಿಸುತ್ತಾರೆ. ನಾವೆಲ್ಲ ಮುಂದುವರಿಯುವ ವಿಷಯವಾಗಿ ಯೋಚಿಸುತ್ತೇವೆ. ಭವಿಷ್ಯತ್ತಿನ ಹಲವು ಕನಸುಗಳನ್ನು ನನಸಾಗಿಸಲು ಪ್ರಯಾಸಪಡುತ್ತೇವೆ. ನಮ್ಮಲ್ಲಿ ಹಲವು ಮಂದಿ ನಿಷ್ಕಾಮ ಜೀವನವನ್ನು ಕಳೆದಿದ್ದಾರೆ, ಬೇರೆಯವರ ಸೇವೆ ಗೈದಿದ್ದಾರೆ. ಇತರರಿಗಾಗಿ ಬಾಳಿ ಇತರರಿಗಾಗಿಯೇ ಜೀವನವನ್ನೂ ಮುಗಿಸಿದ್ದಾರೆ. ಮಾನವ ಜಾತಿಯನ್ನು ಎಲ್ಲಾ ವಿಧವಾಗಿ ಸಮೃದ್ಧಿಯತ್ತ ಸಾಗಿಸಿದ್ದಾರೆ. ಇಂತಹ ಮಹಾಪುರುಷರು ಪ್ರತಿಯೊಂದು ರಾಷ್ಟ್ರದಲ್ಲಿ ಪ್ರತಿಯೊಂದು ಯುಗದಲ್ಲಿ ಜನ್ಮವೆತ್ತುತ್ತಾರೆ, ಸಮಾಜದ ಉದ್ಧಾರಮಾಡಿ ಯಶಸ್ವಿಯಾದರು. ಅವರ ಮೇಲೆ ನಮಗೆ ಅಭಿಮಾನವಿದೆ.

## ಧರ್ಮವು ಮತ ಅಥವಾ ಪಂಥವಲ್ಲ

ಭಾರತವಾಸಿಗಳಾದ ನಾವು ಮತ ಅಥವಾ ರಿಲೀಜನ್ ಶಬ್ದವನ್ನು ಬಳಸಲು ಸಂಕೋಚ ಪಡುತ್ತೇವೆ. ಇವೆರಡಕ್ಕೂ ಸೀಮಿತ ಹಾಗೂ ಸಂಕುಚಿತವಾದ ಅರ್ಥವಿದೆ. ನಾವು ಮತ ಅಥವಾ ಪಂಥದ ಹೆಸರೆತ್ತುವಾಗ ವಿಶಿಷ್ಟ ಮಠ, ಇಗರ್ಜಿ, ಮಸೀದಿ ಅಥವಾ ದೇವಾಲಯವನ್ನುಳ್ಳ ವಿಶಿಷ್ಟ ಪೂಜಾ ಪದ್ಧತಿ ಹಾಗೂ ಆಡಂಬರವನ್ನುಳ್ಳ ಒಂದು ಮತದ ವಿಷಯ ಮನಸ್ಸಿನಲ್ಲಿ ಬೇರೂರಿಕೊಂಡಿರುತ್ತದೆ. ಬೇರೆಯವರು ಮತ ರಿಲೀಜನ್ ಎಂಬುದಕ್ಕೆ ವಿಶ್ವಾಸ ಮತ್ತು ಶ್ರದ್ಧೆಯೆಂಬ ಪರಂಪರಾಗತ ಅರ್ಥ ತೆಗೆದುಕೊಳ್ಳಬಹುದು. ನಾವಾದರೋ ಅದನ್ನು ಮತ, ಪಂಥ, ಸಂಪ್ರದಾಯ ಎಂದು ಹೇಳುತ್ತೇವೆ. ಅವುಗಳಿಗಾಗಿ ಕೆಲವು ಸಲ ನಾವು ಧರ್ಮ ಎಂಬ ಶಬ್ದವನ್ನೂ ಬಳಸುವುದುಂಟು. ವರ್ತಮಾನಕಾಲದಲ್ಲಿ ಸುಖ ಸಂತೋಷ ಶಾಂತಿಗಳನ್ನು ತಂದು ಕೊಡುವ ಹಾಗೂ ಭವಿಷ್ಯತ್ತಿನಲ್ಲಿ ಇನ್ನೂ ಹೆಚ್ಚು ಸುಖ ಶಾಂತಿಯನ್ನೀಯುವ ಸಾಧನೆಯನ್ನು ನಾವು ಧರ್ಮವೆಂದು ಕರೆಯುತ್ತೇವೆ. ನಮ್ಮ ಸುಖ, ಆನಂದ ಅಥವಾ ಸಂತೋಷವು ಕೇವಲ ಕ್ಷಣಿಕವಾಗಲೀ, ಬಾಹ್ಯಾಡಂಬರಯುಕ್ತವಾಗಲೀ ಆಗಿರದೆ ಆ ಆನಂದವು ಅಂತರತಮದಲ್ಲಿ ಸಮಾವಿಷ್ಟವಾಗಿರಬೇಕು. ಹೊರಗಿನದಕ್ಕಿಂತ ಹೆಚ್ಚು ಒಳಗಿನದ್ದಾಗಿರಬೇಕು, ದೇಶ ಕಾಲಾತೀತವಾಗಿರಬೇಕು. ವೇದದ ತತ್ತ್ವಜ್ಞಾನವು ಪುರುಷಾರ್ಥ ಪ್ರೇರಿತ ಯಥಾರ್ಥವಾದವಾಗಿದೆ.

ಇದಕ್ಕೆ ವಿರುದ್ಧವಾದ ಇನ್ನೊಂದು ವಾದವೂ ಇದೆ – ಪುರುಷಾರ್ಥ ಹೀನವಾದ ಶೂನ್ಯವಾದ. ಮಾನವ ಜೀವನದಲ್ಲಿ ಕೆಲವು ಜೋಡಿ (ದ್ವಂದ್ವ) ಗಳಿವೆ : ಸೈತಾನ-ಈಶ್ವರ,

ಅಸುರ-ದೇವ, ಅಂಧಕಾರ-ಪ್ರಕಾಶ, ಅವಿದ್ಯಾ-ವಿದ್ಯಾ, ಮಾಯಾ-ಬ್ರಹ್ಮ ಇತ್ಯಾದಿ. ಆ ಶಬ್ದಗಳನ್ನು ಬಳಸಿ ನಾವು ನಮ್ಮ ವಿಕಾಸ ಕ್ರಮವನ್ನು ತಿಳಿಸುವಂತಿದೆ. ಒಂದು ಮೂಲೆ ಅವಿದ್ಯೆಯಾದರೆ ಇನ್ನೊಂದು ಮೂಲೆ ವಿದ್ಯೆಯಾಗಿದೆ. ಒಂದು ಕಡೆ ಅಂಧಕಾರವಿದ್ದರೆ ಇನ್ನೊಂದೆಡೆ ಜ್ಯೋತಿಯಿದೆ. ಮಾನವನು ಬರುಬರುತ್ತಾ ಕೆಳಗಿನಿಂದ ಮೇಲಕ್ಕೇರುತ್ತಾನೆ. ಒಂದು ಕಡೆ ಪ್ರತಿಮುಖರಾಗಿ ಇನ್ನೊಂದೆಡೆ ಉನ್ಮುಖರಾಗಿ ಮುಂದೆ ಸಾಗುತ್ತಿರುತ್ತೇವೆ. ಕೆಳಗಿನಿಂದ ಮೇಲೇರಲು ಸಹಾಯಕವಾದುದೇ ಧರ್ಮವು. ನಮ್ಮ ಒಂದು ಬ್ರಾಹ್ಮಣಗ್ರಂಥ ದಲ್ಲಿ ಸುಂದರವಾದ ವಾಕ್ಯವೊಂದಿದೆ.

**ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ**
**ಮೃತ್ಯೋರ್ಮಾ ಅಮೃತಂ ಗಮಯ ॥**

(ಅಸತ್ಯದಿಂದ ಸತ್ಯದ ಕಡೆಗೂ, ಕತ್ತಲೆಯಿಂದ ಬೆಳಕಿಗೂ, ಮೃತ್ಯುವಿನಿಂದ ಅಮೃತದತ್ತಲೂ ಒಯ್ಯು)

ಒಂದು ಕಡೆ ನಾವು ಬಂಧನದಲ್ಲಿ ಸಿಲುಕಿದ್ದೇವೆ, ಇನ್ನೊಂದೆಡೆ ನಮ್ಮಿಂದ ಬಹು ದೂರ ಮೋಕ್ಷದ ಸ್ಥಿತಿಯಿದೆ. ನಾವು ಬಂಧನಗಳ ಮುಖಾಂತರ ಉತ್ತರೋತ್ತರ ಉನ್ನತಿಯತ್ತ ಸಾಗುತ್ತಾ ತೀರಾ ಬಂಧನ ಮುಕ್ತರಾಗಬೇಕೆಂದೇ ನಮಗಿವು ದೊರೆತಿವೆ. ಬಂಧನಗಳ ಈ ಮಹತ್ತ್ವವನ್ನರಿಯಲು ಧರ್ಮವು ನಮಗೆ ಸಹಾಯಕವಾಗಿದೆಯೆಂಬ ರಹಸ್ಯವನ್ನರಿತು ಕೊಂಡಲ್ಲಿ ನಮಗೆ ಮೃತ್ಯುವಿನ ಭಯವಿರುವುದಿಲ್ಲ. ಅಸಫಲತೆ ಅಥವಾ ನಿರಾಶೆಯು ಸಂದೇಹ ವುಂಟಾಗಲಾರದು. ಎಲ್ಲೆಡೆ ಅಭಯವೇ ಅಭಯದ ವಾತಾವರಣ ಮೂಡುತ್ತದೆ. ಸಮಸ್ತ ಶತ್ರು ಭಾವನೆಯು ಅಡಗಿಹೋಗುತ್ತದೆ. ಆಗ ಜೀವನದ ಎಲ್ಲಾ ಸವಾಲುಗಳನ್ನು ವೀರತ್ವ ಪೂರ್ವಕ ಸ್ವೀಕರಿಸಲು ಸಮರ್ಥನಾಗುತ್ತಾನೆ. ವರ್ತಮಾನದ ಅಥವಾ ಭವಿಷ್ಯತ್ಕಾಲದ ಆಹ್ವಾನಗಳು ಅವನನ್ನು ವಿಚಲಿತಗೊಳಿಸಲಾರವು. ಮಹರ್ಷಿ ದಯಾನಂದರು ಆರ್ಯಸಮಾ ಜದ ವಿಶಿಷ್ಟ ನಿಯಮವೊಂದರಲ್ಲಿ ಹೇಳಿದ್ದಾರೆ—**ಅವಿದ್ಯೆಯ ನಾಶವನ್ನೂ ವಿದ್ಯೆಯ ವೃದ್ಧಿ ಯನ್ನೂ ಮಾಡಬೇಕು.** ಈ ಅವಿದ್ಯೆ ವ್ಯಕ್ತಿಗತವೂ ಆಗಬಹುದು, ಸಾಮಾಜಿಕವೂ ಆಗ ಬಹುದು. ಅದಕ್ಕಾಗಿ ಅವರು ಇನ್ನೊಂದು ನಿಯಮದಲ್ಲಿ "ಯಾವನೊಬ್ಬನೂ ತನ್ನ ಉನ್ನತಿ ಯಲ್ಲಿಯೇ ಸಂತುಷ್ಟನಾಗಿರದೆ ಎಲ್ಲರ ಉನ್ನತಿಯಲ್ಲಿ ತನ್ನ ಉನ್ನತಿಯು ನಿಹಿತವಾಗಿದೆಯೆಂದು ತಿಳಿಯಬೇಕು." ಈ ಉದ್ದೇಶ್ಯದ ಪೂರ್ತಿಗಾಗಿಯೇ ಅವರ ಇನ್ನೊಂದು ನಿಯಮ ಹೀಗಿದೆ— "ಎಲ್ಲರೊಂದಿಗೆ ಪ್ರೀತಿಪೂರ್ವಕ ಯಥಾಯೋಗ್ಯವಾಗಿ ವ್ಯವಹರಿಸಬೇಕು."

## ವಿಜ್ಞಾನ ಸಫಲ; ಧರ್ಮ ವಿಫಲ

ಸಾಧಾರಣವಾಗಿ ಕಳೆದ ಮೂರು ಶತಮಾನಗಳನ್ನು ನಮ್ಮ ವಿಜ್ಞಾನ ಮತ್ತು ಟೆಕ್ನೀಕ್ ಯುಗವೆಂದು ನಾವು ಹೇಳುತ್ತೇವೆ. ಈ ಎರಡರ ಚಮತ್ಕಾರಗಳು ಜಗತ್ತಿನ ಚಿತ್ರ ವನ್ನು ಬಹಳವಾಗಿ ಬದಲಿಸಿವೆಯೆಂಬುದರಲ್ಲೇನೂ ಸಂದೇಹವಿಲ್ಲದಿದ್ದರೂ ಈ ಯುಗದ ಅಧ್ಯಾತ್ಮೀಕರಣವು ಪರಮಾವಶ್ಯಕವಾಗಿದೆ. ಅಧ್ಯಾತ್ಮದ ಎಲ್ಲಾ ಕ್ಷೇತ್ರದ ವಿಚಾರಕರು ವೈಜ್ಞಾನಿಕ ಯುಗದ ಆಹ್ವಾನಗಳನ್ನು ಬಲ್ಲರು. ವಿಜ್ಞಾನ ಟೆಕ್ನೀಕುಗಳು ತಮ್ಮ ಕ್ಷೇತ್ರ

ದಲ್ಲಿ ಅಪೂರ್ವ ಸಫಲತೆಯನ್ನು ಸಾಧಿಸಿವೆ. ನಾವು ಆಶಿಸಿದ್ದಕ್ಕಿಂತ ಹೆಚ್ಚನ್ನು ಅವು ನಮಗಿತ್ತಿವೆ. ಮನಸ್ಸಿನಲ್ಲಿ ಮಂಡಿಸಿದ ಸ್ವಪ್ನಗಳಿಗೆ ಸಾಕಾರ ರೂಪವನ್ನಿತ್ತಿವೆ. ಇದಕ್ಕೆ ವಿರುದ್ಧವಾಗಿ ಇನ್ನೊಂದೆಡೆ ಧರ್ಮವಾದಿಗಳು ಅಥವಾ ಸಂಪ್ರದಾಯವಾದಿಗಳು ಆಧಿಭೌತಿಕ ಕ್ಷೇತ್ರ ಪ್ರಗತಿಯೊಂದಿಗೆ ತಮ್ಮ ಕ್ಷೇತ್ರದಲ್ಲಿ ಮುಂದುವರಿಯಲಿಲ್ಲ. ಇಗರ್ಜಿಗಳ, ಮಸೀದಿಗಳ, ಮಂದಿರಗಳ, ದೇವಾಲಯ–ಶಿವಾಲಯ–ಪಗೋಡಗಳ ಸಂಖ್ಯೆ ಹೆಚ್ಚಿದೆ. ಅವುಗಳ ಹೆಚ್ಚಳದೊಂದಿಗೆ ಮಾನವನಲ್ಲಿ ನೈತಿಕತೆ, ನ್ಯಾಯಪ್ರಿಯತೆ, ಔದಾರ್ಯ ಹಾಗೂ ಶಾಲೀನತೆಯೂ ಹೆಚ್ಚಬೇಕಾಗಿತ್ತು. ಆದರೆ ಪರಿಣಾಮ ಅತ್ಯಂತ ಪ್ರತಿಕೂಲವಾಗಿದೆ. ಒಂದೆಡೆ ನಾವು ಹಿಂದೆ ಇದ್ದುದಕ್ಕಿಂತ ಹೆಚ್ಚು ವೈಭವವಂತರಾದೆವು. ವಿಜ್ಞಾನದ ಎಲ್ಲಾ ಕ್ಷೇತ್ರಗಳಲ್ಲಿ ನಮ್ಮ ಉಪಲಬ್ಧಿಗಳು ಪ್ರಶಸ್ತವಾದುವು. ಆದರೆ ಅದರ ಜೊತೆಯಲ್ಲೇ ನಾವು ಹೆಚ್ಚು ಅಪ್ರಾಮಾಣಿಕರೂ, ವಿಶ್ವಾಸಘಾತಿಗಳೂ ಆಗಿಬಿಟ್ಟಿದ್ದೇವೆ. ಜೀವನದ ಈ ಮೂಲ್ಯಗಳ ದೃಷ್ಟಿಯಿಂದ ವ್ಯಕ್ತಿಯೂ ಪತಿತನಾಗಿದ್ದಾನೆ, ನಮ್ಮ ಸಮಾಜವೂ ಪತನಕ್ಕಿಳಿದಿದೆ. ಅದರ ಪರಿಣಾಮವು ಸ್ಪಷ್ಟವಿದೆ. ನಮ್ಮ ಸಮೃದ್ಧಿ ವೈಭವಗಳಿಂದಲೇ ಹೊಸ ದೈತ್ಯನೊಬ್ಬ ಹುಟ್ಟಿಕೊಂಡು ನಮ್ಮನ್ನೆಲ್ಲಾ ಕಬಳಾಯಿಸಲು ಉತ್ಸುಕನೂ, ಪ್ರಯತ್ನಶೀಲನೂ ಆಗಿರುವನು. ಈ ವಿಕಟಪರಿಸ್ಥಿತಿಯನ್ನು ಎದುರಿಸಲು ಎಲ್ಲಾ ಧರ್ಮಾವಲಂಬಿಗಳು ಪೂರ್ಣ ತಯಾರಿಯ ಅಸಫಲರಾಗಿರುವರೆಂಬುದನ್ನು ತಾವೆಲ್ಲ ಒಪ್ಪಲೇಬೇಕಾಗುವುದು.

## ಕೃತ್ರಿಮ ಚಿನ್ನ

ನಮ್ಮ ಎಲ್ಲಾ ಧಾರ್ಮಿಕ ಸಂಪ್ರದಾಯಗಳು ತೀರಾ ವಿಫಲವಾಗಿವೆಯೆಂದು ಹೇಳಲು ನನಗೇನೂ ಸಂಕೋಚವಾಗುತ್ತಿಲ್ಲ. ನಮ್ಮ ಅಸಫಲತೆಯನ್ನೊಪ್ಪಲು ನಾವೇಕೆ ಹಿಂಜರಿಯಬೇಕು? ಅಧ್ಯಾತ್ಮ ಹಾಗೂ ಧರ್ಮದ ಡಂಗುರ ಹೊಡೆಯುವವರ ಗುಟ್ಟು ರಟ್ಟಾಗಿದೆಯೆಂಬುದು ಪರಮ ಸತ್ಯವಾಗಿದೆ. ಕ್ರೈಸ್ತರೂ, ಹಿಂದುಗಳೂ ಅಸಫಲರಾಗಿದ್ದಾರೆ. ಮತ ಮತಾಂತರಗಳು ವೃದ್ಧಿ ಹೊಂದುತ್ತಾ ಹೋದ ಹಾಗೆಲ್ಲ ಜನರ ನೈತಿಕ ಪತನವೂ ಆಗುತ್ತ ಹೋಯಿತು. ಏಕೆಂದರೆ ಈ ಸಂಪ್ರದಾಯಗಳು ಸತ್ಯದ ಹೆಸರಿನಲ್ಲಿ ಮಿಥ್ಯಾ ಅಂಧ ವಿಶ್ವಾಸಗಳನ್ನು ಪೋಷಿಸುತ್ತ ಹೋದವು. ಭಾವೀಸ್ವರ್ಗದ ಗುತ್ತೇದಾರರಾಗಿಬಿಟ್ಟವು. ಈ ವಿಷಯದಲ್ಲಿ ನಾವೆಲ್ಲ ಅಜ್ಞಾನಾಂಧಕಾರದಲ್ಲಿದ್ದೆವು. ನವೀನ ಯುಗದ ಮಾನವನು ಹುಟ್ಟಿಸಿದ ಸಮಸ್ಯೆಗಳಿಗೆ ಸಮಾಧಾನಗೈಯುವ ಸಾಮರ್ಥ್ಯ ಮತಮತಾಂತರಗಳಿಗಿರಲಿಲ್ಲ. ನಾನು ಯಾವಾಗಲೂ ವಿಜ್ಞಾನ ಮತ್ತು ತರ್ಕ್ಕೀಕಿನ ಪೋಷಕನಾಗಿ ಬಂದಿದ್ದೇನೆ. ಇಡೀ ಜೀವನದಲ್ಲಿ ರಸಾಯನ ಶಾಸ್ತ್ರವನ್ನು ಓದುತ್ತಾ ಓದಿಸುತ್ತಾ ಬಂದಿದ್ದೇನೆ. ವಿಜ್ಞಾನವೂ ತರ್ಕ್ಕೀಕ್ಕೂ ಸೇರಿ ಸಮಾಜದಲ್ಲಿ ತಮ್ಮ ದೃಢಸ್ಥಾನವನ್ನು ನಿರ್ಮಿಸಿಕೊಂಡಿವೆ. ಅವುಗಳ ಉಪಲಬ್ಧಿಗಳನ್ನು ಯಾರುತಾನೇ ಸ್ವಾಗತಿಸಲಾರರು? ತಾವು ವಿಜ್ಞಾನವನ್ನೂ, ತರ್ಕ್ಕೀಕನ್ನೂ ಬಯ್ಯಬಲ್ಲಿರಿ. ತೆಗಳಬಲ್ಲಿರಿ. ಆದರೆ, ಅವೆರಡೂ ನಮಗೆ ಸತ್ಯವನ್ನು ಪರೀಕ್ಷಿಸುವ ನೂತನ ಸಾಧನವನ್ನು ಕೊಟ್ಟಿವೆ. ನಮಗೆ ನಿರೀಕ್ಷಣ, ಪ್ರಯೋಗ, ಅನುಭವ ಮತ್ತು ಅನುಭೂತಿಯ ಆಧಾರದ ಮೇಲೆ ಹೊಸ ತರ್ಕಶಾಸ್ತ್ರವನ್ನು ಕೊಟ್ಟಿದೆ. ಹೊಸ ರೀತಿಯಿಂದ ತಿಳಿಯುವ ತತ್ತ್ವದರ್ಶನವನ್ನಿತ್ತಿದೆ. ಜ್ಞಾನದ ಅನುಸಂಧಾನ–ಅನುಶೀಲನಗಳಿಂದ ತಿಳಿದುಬಂದ ಹೊಸ ವಿಷಯಗಳ ಮೂಲಕ ನಾವು ವ್ಯಷ್ಟಿ ಮತ್ತು ಸಮಷ್ಟಿಯ ಜೀವನದಲ್ಲಿ ಪರಿವರ್ತನೆಯನ್ನು ತಂದುಕೊಂಡಿದ್ದೇವೆ.

ವಿಜ್ಞಾನದ ಚಮತ್ಕಾರಿಕ ಆವಿಷ್ಕಾರಗಳ ಎದುರಿನಲ್ಲಿ ಅವತಾರಗಳೂ, ಯೋಗಿಗಳೂ, ಪೈಗಂಬರರೂ ತೋರಿಸಿದ ಚಮತ್ಕಾರಗಳು ಸಟೆಯಾಗಿಬಿಟ್ಟವೆ. ಪ್ರಾಚೀನ ಚಮತ್ಕಾರಗಳ ಗುಟ್ಟು ರಟ್ಟಾಗಿ ಅವನ್ನೀಗ ಜನರಿಂದು ತೀರಾ ಸುಳ್ಳೆಂದು ನಂಬುತ್ತಿದ್ದಾರೆ. ಬೋಳ ಜನತೆಯನ್ನು ಎಷ್ಟರ ತನಕ ಮೋಸಪಡಿಸಬಹುದು? ಯಾವುದನ್ನು ನಾವು ಪುತ್ತಳಿ ಬಂಗಾರವೆಂದುಕೊಂಡಿದ್ದೆವೋ ಅದು ಹಿತ್ತಾಳೆಯಾಯಿತು. ಜನರು ಧರ್ಮ, ಅಧ್ಯಾತ್ಮ ಹಾಗೂ ದಿವ್ಯದೃಷ್ಟಿಯ ಹೆಸರಿನಲ್ಲಿ ನಮ್ಮನ್ನು ಕಗ್ಗತ್ತಲೆಯಲ್ಲಿರಿಸಿದ್ದರು. ಪೌರಾಣಿಕ ಬುರುಡೆಗಳೂ ಹಾಗೂ ಕಲ್ಪನೆಗಳೂ ಮಧ್ಯಯುಗದ ಎಲ್ಲಾ ದೇಶಗಳ ಜನತೆಯನ್ನು ಮೋಸಕ್ಕೀಡು ಮಾಡಿದವು. ಕಾಲ್ಪನಿಕ ಸ್ವರ್ಗ, ಪರೋಕ್ಷ ನರಕ ಮತ್ತು ದಿವ್ಯ ದೀಪನದ ಎಷ್ಟೋ ವಿಧವಾದ ಸುಳ್ಳು ದೃಶ್ಯಗಳನ್ನು ನಾವು ಜನತೆಯೆದುರಿನಲ್ಲಿಟ್ಟಿದ್ದೆವು. ಅಜ್ಞಾನಿಗಳ ಮಾತನ್ನು ಬಿಡಿ, ಜ್ಞಾನವಿಜ್ಞಾನಗಳನ್ನು ಬಲ್ಲವರೂ ಹಲವು ಬಾರಿ ಮೋಸಕ್ಕೀಡಾದರು. ಏಕೆಂದರೆ ನಮ್ಮ ಪೈಕಿ ಎಲ್ಲರಲ್ಲಿಯೂ ಕೆಲವು ದುರ್ಬಲತೆಗಳಿವೆ. ಎಲ್ಲರ ಭೂತ ಭವಿಷ್ಯತ್ತುಗಳು ಅನಿಶ್ಚಿತವಾಗಿವೆ. ಎಲ್ಲರ ಎದುರಿನಲ್ಲಿ ವಿವಶತೆಯ ಪರಿಸ್ಥಿತಿಗಳು ಬಂದೊದಗುತ್ತವೆ. ಆ ಕಾಲದಲ್ಲಿ ಅತ್ಯಂತ ಬುದ್ಧಿವಂತರೂ ಸಹ ಮೋಸಕ್ಕೀಡಾಗುತ್ತಾರೆ. ಈ ಮೋಸವು ಹಿಂದುಗಳ ಹೆಸರಿನಲ್ಲಿಯೂ ನಡೆಯಿತು. ಕ್ರೈಸ್ತ, ಬೌದ್ಧ, ಮುಸ್ಲಿಮರ ಹೆಸರಿನಲ್ಲಿಯೂ ನಡೆಯಿತು.

ಸತ್ಯವನ್ನು ಎಲ್ಲ ಮತಮತಾಂತರಗಳೂ ಗೌರವಿಸುತ್ತವೆಂದು ಸಾಧಾರಣವಾಗಿ ಹೇಳಲಾಗುತ್ತದೆ. ಎಲ್ಲಾ ಮತಗಳಲ್ಲಿ ಅಂಧವಿಶ್ವಾಸಗಳೂ ರೂಢಿವಾದಿತ್ವವೂ ಸಮಾನವಾಗಿವೆ. ೧೯ನೇ ಶತಮಾನದಲ್ಲಿ ಮಹರ್ಷಿ ದಯಾನಂದರ ಗಮನ ಇತ್ತ ಹರಿಯಿತು. ೧೯ನೇ ಶತಮಾನದ ಧರ್ಮಾಚಾರ್ಯರು ಹಾಗೂ ಧರ್ಮ ಪ್ರವರ್ತಕರಲ್ಲಿ ವಿಜ್ಞಾನದ ಉದಯವನ್ನು ಸ್ವಾಗತಿಸಿದವರು ದಯಾನಂದರೊಬ್ಬರೇ ಆಗಿರುವರು. ವಿಜ್ಞಾನದ ಆಧಾರದ ಮೇಲೆ ನಾವು ನೈತಿಕತೆ ಹಾಗೂ ಸದಾಚಾರದ ತತ್ತ್ವಗಳನ್ನೂ, ಆಸ್ತಿಕತೆ ಮತ್ತು ಅಧ್ಯಾತ್ಮವನ್ನು ಚೆನ್ನಾಗಿ ತಿಳಿದುಕೊಂಡು ತಥ್ಯಹೀನ ಮಾನ್ಯತೆಗಳನ್ನು ಬದಲಾಯಿಸಬೇಕೆಂದು ಅವರು ಸಾರಿದರು. ಆದುದರಿಂದಲೇ ನಾನು ಮತಗಳ ವಿಷಯಗಳನ್ನು ಬುದ್ಧಿಗ್ರಾಹ್ಯವಾಗಿ ಮಾಡಬೇಕು. ವಿಜ್ಞಾನ ಮತ್ತು ಸಮಾಜಶಾಸ್ತ್ರಗಳಿಗೆ ಆಧ್ಯಾತ್ಮದ ಒಪ್ಪವನ್ನು ಕೊಡಬೇಕು, ನನ್ನ ಭಾಷಣಗಳಲ್ಲಿಯೂ, ಪ್ರವಚನಗಳಲ್ಲಿಯೂ ಹೆಚ್ಚಾಗಿ ಹೇಳುತ್ತೇನೆ. ಹಾಗೆ ಆದಾಗಲೇ ಧರ್ಮ (ಮತ) ಮತ್ತು ವಿಜ್ಞಾನದಿಂದ ಲೋಕಕಲ್ಯಾಣ ಸಾಧನೆಯಾಗಬಲ್ಲುದು.

## ಧರ್ಮ ಮತ್ತು ವ್ಯಾಪಾರಿಕ ಸ್ಪರ್ಧೆ

ಧರ್ಮದ ಕ್ಷೇತ್ರದಲ್ಲಿಯೂ ಜನರು ವ್ಯಾಪಾರದಂತಹ ಸ್ಪರ್ಧೆಯನ್ನೆಸಗಲೆಳಸುವುದು ವಿಚಿತ್ರವಲ್ಲವೆ? ಸಾಧಾರಣ ಇಂತಹ ಮಾತುಗಳೇ ನಡೆಯುತ್ತವೆ. ಪರಸ್ಪರ ಅನಾವಶ್ಯಕ ಹಾಗೂ ಅನುಪಯುಕ್ತ ಚರ್ಚೆ ನಡೆಯುತ್ತದೆ. ಇದರಿಂದ ದೀನದರಿದ್ರ ಜನತೆ ದುಃಖಕ್ಕೀಡಾಗುತ್ತದೆ. ಈ ದೇಶದಲ್ಲೇನು, ವಿದೇಶಗಳಲ್ಲೇನು ಎಲ್ಲಾ ಧಾರ್ಮಿಕ ಸಂಘಟನೆಗಳು "ಪ್ರೇಮ ಮತ್ತು ಸೇವೆ" ಎಂಬ ಘೋಷವನ್ನು ಮೊಳಗಿಸಿರುವರು. ದೀನದರಿದ್ರರ

ಸೇವೆ ತಾನೆ ನಡೆಯುಬೇಕಾಗಿದೆ! ಎಲ್ಲ ಮತದವರು–'ನಮ್ಮಿಂದ ಸೇವೆ ಜರಗಲಿ, ನಮ್ಮಿಂದ ಸೇವೆ ಸಲ್ಲಲಿ' ಎನ್ನುತ್ತಿರುತ್ತಾರೆ. ಇದರಿಂದೇನು ತಿಳಿದುಬರುತ್ತದೆ? ಸೇವೆ ಮಾಡಿ ಬಡವರ ಹಿತ ಮಾಡುವ ಉದ್ದೇಶ್ಯವಾಗಿರದೆ ತಮ್ಮ ತಮ್ಮ ಸಂಘಟನದ, ತಮ್ಮ ತಮ್ಮ ಮತಪಂಥಗಳ ಜಾಹೀರಾತು ಮಾಡುವುದೇ ಉದ್ದೇಶ್ಯವಾಗಿರುವಂತಿದೆ. ಒಂದೆಡೆ ಔಷಧಾಲಯಗಳಿವೆ. ಇನ್ನೊಂದೆಡೆ ಮುಸ್ಲಿಮರ ಮಿಶನುಗಳಿವೆ, ಮತ್ತೊಂದೆಡೆ ಹಿಂದುಗಳ ಶಾಲೆಗಳಿವೆ. ಶಿಕ್ಷಣ ಅಥವಾ ಸೇವೆಯ ದೃಷ್ಟಿಯಲ್ಲಿ ಯಾರೂ ಕ್ರೈಸ್ತ, ಮುಸ್ಲಿಂ ಅಥವಾ ಹಿಂದು ಅಲ್ಲವೆಂಬುದನ್ನಾರೂ ಯೋಚಿಸುವುದಿಲ್ಲ. ಎಲ್ಲರಿಗೂ ಬಾಯಾರುತ್ತದೆ, ನೀರು ಎಲ್ಲರಿಗೂ ಬೇಕು. ರೋಗಗಳು ಎಲ್ಲರಲ್ಲಿ ಹುಟ್ಟುತ್ತವೆ, ಔಷಧಾಲಯಗಳು ಹಿಂದುಗಳದಾಗಲೀ, ಕ್ರೈಸ್ತರದಾಗಲೀ ಇರಲಾರವು. ಸೇವಾ ಶುಶ್ರೂಷೆಗಳ ಹೆಸರಿನಲ್ಲಿ ಮತ ಪಂಥಗಳವರು ತಮ್ಮ ಜಾಹೀರಾತಿನ ಬೋರ್ಡು ಹಾಕಿಕೊಂಡಿರುವರು. ಸೇವಾ ಶುಶ್ರೂಷೆಯ ಹೆಸರಿನಲ್ಲಿಯೇ ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತರನ್ನಾಗಿ ಮಾಡುತ್ತಾರೆ. ಯಾವನಾದರೂ ಕ್ರೈಸ್ತನು ಬಾಯಾರಿದ ಮನುಷ್ಯನಿಗೆ ನೀರು ಕುಡಿಸಿದಲ್ಲಿ ಬಾಯಾರಿದವನು ಈ ಕಾರಣದಿಂದಲೇ ಕ್ರೈಸ್ತಮತವನ್ನು ಶ್ರೇಷ್ಠವೆಂದು ಒಪ್ಪಬೇಕೆಂಬ ಶರ್ತವು ಉಚಿತವಾಗಿದೆಯೆ?

ಈ ರೀತಿಯ ಸ್ಪರ್ಧೆಯು ಸಣ್ಣ–ದೊಡ್ಡ ಎಲ್ಲಾ ಕ್ಷೇತ್ರಗಳಲ್ಲಿವೆ. ಜಾತಿಯ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ, ಪ್ರದೇಶ, ದೇಶ, ವಿದೇಶ ಎಲ್ಲರ ಹೆಸರಿನಲ್ಲಿದೆ. ನಾನೊಂದು ಸಲ ಆಫ್ರಿಕಾ ದೇಶಕ್ಕೆ ಹೋದೆ. ಅಲ್ಲಿನ ಕ್ರೈಸ್ತರ ಹಲವು ಪಂಥಗಳು ಹಣವನ್ನು ಖರ್ಚು ಮಾಡುತ್ತಿವೆ. ಎಲ್ಲರ ಸೇವಾ ಸಂಸ್ಥಾನಗಳು ಬೇರೆ ಬೇರೆಯವೆ. ಪ್ರತಿಯೊಂದು ಚರ್ಚಿನ ಬೇರೆ ಬೇರೆ ಔಷಧಾಲಯಗಳು, ಅನಾಥಾಲಯಗಳು, ಸ್ಕೂಲುಗಳಿವೆ. ಪ್ರತಿಯೊಂದ ಚರ್ಚೂ ತಾನು ಇತರ ಚರ್ಚುಗಳಿಗಿಂತ ಶ್ರೇಷ್ಠವಾಗಿದ್ದೇವೆ. ಕ್ರೈಸ್ತರಾಗುವುದಾದರೆ ನನ್ನ ಚರ್ಚಿಗೆ ಬನ್ನಿರಿ. ಏಕೆಂದರೆ ನಿಮ್ಮ ಆರೈಕೆ ನನ್ನ ಚರ್ಚಿನಲ್ಲಾಗಿದೆ. ನಿಮ್ಮ ಉಪಚಾರ ನಮ್ಮ ಹಾಸ್ಪಿಟಲಿನಲ್ಲಿ ಚೆನ್ನಾಗಿ ಆಗಬಲ್ಲುದು. ದರ್ಶನಶಾಸ್ತ್ರ ಅಥವಾ ತತ್ತ್ವಜ್ಞಾನದ ಕ್ಷೇತ್ರವೂ ಈ ಸಂಕೀರ್ಣ ಭಾವನೆಯಿಂದ ಸರ್ವಥಾ ಮುಕ್ತವಾಗಿಲ್ಲ. ಇಂದಿಗೂ ಕ್ರಿಶ್ಚಿಯನ್ ಫಿಲಾಸಫಿ, ಗ್ರೀಕ್ ದರ್ಶನ, ಭಾರತೀಯ ಅಧ್ಯಾತ್ಮ ಮೊದಲಾದ ಶಬ್ದಗಳ ಪ್ರಯೋಗವಾಗುತ್ತಿವೆ. ಯಾರಾದರೂ ಮುಸ್ಲಿಂ ಭೌತಿಕೀ, ಕ್ರೈಸ್ತ ಟೆಕ್ನಿಕ್ ಅಥವಾ ಭಾರತೀಯ ಪ್ರಾಣಿವಿಜ್ಞಾನವಿದೆಯೆಂಬ ಮಾತನ್ನು ತಾವು ಈ ಯುಗದಲ್ಲಿ ಕೇಳಿರಲಿಕ್ಕಿಲ್ಲ. ಕಾರಣವೇನೆಂದರೆ, ವಿಜ್ಞಾನ ಮತ್ತು ಟೆಕ್ನೀಕಿನ ಕ್ಷೇತ್ರದಲ್ಲಿ ಇಂತಹ ಸಂಕೀರ್ಣ ವಿಚಾರಗಳು ಪೂರ್ಣ ಮುಗಿದುಹೋಗಿವೆ. ಇಂತಹದೇ ವ್ಯವಹಾರವನ್ನು ನಾವು ಅಧ್ಯಾತ್ಮ ಹಾಗೂ ನೈತಿಕತೆಯ ಕ್ಷೇತ್ರದಲ್ಲಿಯೂ ಮಾಡಬೇಕು. ಸತ್ಯ ಮತ್ತು ಅಸತ್ಯ ರಹಸ್ಯಗಳನ್ನು ಉದ್ಘಾಟಿಸಲು ಮಾನವ ಮಾತ್ರನು ಸಹಾಯಕನಾಗಬೇಕು. ಎಲ್ಲರೂ ಸೇರಿ ಈ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸಬೇಕು. ಮತಮತಾಂತರಗಳು ತಮ್ಮ ದೃಷ್ಟಿಕೋನಗಳಲ್ಲಿ ಪರಿವರ್ತನೆ ತಂದುಕೊಂಡು ಜ್ಞಾನ ವಿಜ್ಞಾನಗಳ ಒಂದು ಕ್ಷೇತ್ರವನ್ನಾಗಿ ಮಾಡಬೇಕು. ಆತ್ಮನ ಸಂಬಂಧವನ್ನು ನೇರವಾಗಿ ಪರಮಾತ್ಮನೊಡನೆ ಸ್ಥಾಪಿಸಬೇಕು. ನಡುವಿನ ಪೈಗಂಬರ, ಅವತಾರ ಹಾಗೂ ಗುರುಗಳ ಪರಂಪರೆಯಿಂದ ಮುಕ್ತರಾಗತಕ್ಕದ್ದು.

## ಯೋಗ ಹಾಗೂ ಕೆಲವು ಮಂತವ್ಯಗಳು

ಮಹರ್ಷಿ ಪತಂಜಲಿ ಅವರು ಭಾರತದಲ್ಲಿ ರಾಜಯೋಗದ ಒಂದು ಪದ್ಧತಿಗೆ ಜನ್ಮವಿತ್ತರು. ಚಿತ್ತವೃತ್ತಿಗಳ ನಿರೋಧವನ್ನು ಹಾಗೂ ಯಮನಿಯಮಗಳನ್ನು ಆಧಾರವನ್ನಾಗಿಟ್ಟುಕೊಂಡು ಆಚಾರದ ನಿಯಮಗಳನ್ನು ನಿರ್ಮಿಸುವ ಉತ್ಕೃಷ್ಟ ದರ್ಶನವಿದು; ನಮ್ಮ ಒಳಗಿನ ರಹಸ್ಯಗಳನ್ನು ಜಗತ್ತಿನಲ್ಲಿ ಪ್ರವಿಷ್ಟಗೊಳಿಸಲು ಯೋಗವು ಉತ್ಕೃಷ್ಟ ಸಾಧನವಾಗಿದೆ. ಯೋಗದ ಅಭ್ಯಾಸ ಮಾಡಬೇಕು. ಅದರ ಉಪಯೋಗಿತ್ವ ವಿಶ್ವವ್ಯಾಪಿಯಾಗಿದೆ. ಪತಂಜಲಿಯು ಹೇಳಿದುದೇ ಯೋಗದ ಅಂತಿಮ ವಾಕ್ಯವೆಂದು ನಾನು ಹೇಳುವುದಿಲ್ಲ. ಆತ್ಮನ ಸಂಬಂಧವನ್ನು ವಿಶ್ವಾತ್ಮ, ಪರಮಾತ್ಮ ಅಥವಾ ಬ್ರಹ್ಮನೊಡನೆ ಸ್ಥಾಪಿಸಲು ಮಾಡುವ ಪ್ರಯತ್ನಗಳ ಅನುಭೂತಿಯನ್ನು ಆಧಾರವಾಗಿಟ್ಟುಕೊಂಡಿದೆ ಪಾತಂಜಲ ಯೋಗ. ಯೋಗ ವಿಷಯಕ ಕೆಲವು ಮಾತುಗಳನ್ನು ನಾನು "ಪಾತಂಜಲ ರಾಜಯೋಗ" ಎಂಬ ಗ್ರಂಥದಲ್ಲಿ ಮಾಡಿದ್ದೇನೆ. ಈ ದರ್ಶನವು ಯಾವುದೇ ಮತದ್ದಾಗಿರದೆ ಮಾನವ ಮಾತ್ರರಿಗಾಗಿದೆ.

ಎಲ್ಲಾ ಮತಗಳನ್ನು ಒಂದು ಸಂಘಟನದಲ್ಲಿ ಪೋಣಿಸಿಕೊಳ್ಳುವುದು ಈ ಯುಗದ ಮಾನವನ ಕರ್ತವ್ಯವಾಗಿರಬೇಕು. ಈ ರೀತಿ ಮಾಡಲು ಕೆಲವು ಮಂತವ್ಯಗಳನ್ನು ಎಲ್ಲರೂ ಅಂಗೀಕರಿಸುವುದು ಆಗತ್ಯವಿದೆ. ನಾನು ನನ್ನ ತಿಳುವಳಿಕೆಯ ಮೇರೆಗೆ ಕೆಲವು ಸೂತ್ರಗಳ ರೂಪರೇಖೆಯನ್ನಿಲ್ಲಿ ಕೊಡಲು ಪ್ರಯತ್ನಿಸುತ್ತೇನೆ.

೧. ಮಾನವನ ಮತ್ತು ಅನ್ಯ ಸಹಯೋಗಿ ಪ್ರಾಣಿಗಳ ಜೀವನದ ಒಂದು ಸದುದ್ದೇಶ್ಯವಿದೆ–'ಜೀವನವನ್ನು ಪೂರ್ಣತ್ವದತ್ತ ಸಾಗಿಸುವುದು'.

೨. ಸಂಪೂರ್ಣ ಸೃಷ್ಟಿಯ ಯಥಾರ್ಥ ಸಾರ್ಥಕತೆಯಿದೆ. ಈ ಸೃಷ್ಟಿಯು ಮಿಥ್ಯಾ ಅಥವಾ ಕಾಲ್ಪನಿಕವಾಗಿರದೆ ಸೋದ್ದೇಶ್ಯವಾಗಿದೆ, ಶಾಶ್ವತ ನಿಯಮಾನುಕೂಲವಿದೆ.

೩. ಈ ಸೃಷ್ಟಿಯಲ್ಲಿ ಅಪೌರುಷೇಯ ಶಕ್ತಿ ಅಥವಾ ಕಲ್ಪನೆಯ ಅಭಿವ್ಯಕ್ತಿಯಿದೆ. ಈ ಅಪೌರುಷೇಯ ಕಲ್ಪನೆಯು ಕಾಲ ಮತ್ತು ದೇಶ ದೃಷ್ಟಿಯಿಂದ ಒಂದಾಗಿದೆ, ಅದ್ವೈತವಾಗಿದೆ, ದಯಾಳು, ಶಾಶ್ವತವಾಗಿದೆ ಹಾಗೂ ಎಲ್ಲರೂ ಇದಕ್ಕೆ ನತಮಸ್ತಕರಾಗಬೇಕು. ಅದೇ ಪೂಜ್ಯ ಹಾಗೂ ಉಪಾಸ್ಯವಾಗಿದೆ.

೪. ಪ್ರೇಮ ಮತ್ತು ಸೇವೆಯ ಮಾರ್ಗದಿಂದ ಹಾಗೂ ಜೀವನದ ಉಚ್ಚತಮ ಮೂಲ್ಯಗಳ ಅನುಸರಣದಿಂದ ನಾವು ಅವಿದ್ಯೆಯನ್ನು ದಾಟಬಲ್ಲೆವು ಹಾಗೂ ಸತ್ಯವನ್ನೂ ಪರಮಾನಂದವನ್ನೂ ಪಡೆಯಬಲ್ಲೆವು.

೫. ಮರ್ತ್ಯ ಶರೀರದಲ್ಲಿ ಜನ್ಮ ತಾಳಿದ ಪ್ರತಿಯೊಬ್ಬನೂ ತಾನಾಗಿ ತನ್ನ ಬಂಧನಗಳನ್ನು ಕಡಿದೊಗೆಯಲು ಪ್ರಯತ್ನಿಸಬೇಕು. ಈ ಮಾರ್ಗದಲ್ಲಿ ನಡೆದ ನಮ್ಮ ಹಿಂದಿನ ಮಹಾಪುರುಷರನ್ನು ನಾವು ಆದರ ಭಾವನೆಯಿಂದ ಕಂಡು ಅವರ ಮಾರ್ಗವನ್ನನುಸರಿಸಬೇಕು. ಆದರೆ ಇತಿಹಾಸದ ಆ ಮಹಾಪುರುಷರೆಲ್ಲಾ ಮಾನವರೇ ಆಗಿದ್ದರು. ಯಾರೂ ಅವತಾರವಾಗಲೀ, ದೇವದೂತರಾಗಲೀ ಭಗವಂತನ ಮತ್ತು ಭಕ್ತರ ನಡುವಿನ ಏಜಂಟರಾಗಲೀ

ಆಗಲು ಸಮರ್ಥರಲ್ಲವೆಂದು ತಿಳಿಯಬೇಕು. ನಾವು ನಮ್ಮ ತಂದೆ ಭಗವಂತನೊಡನೆ ಜೀವನ ಸಂಬಂಧವನ್ನು ಸ್ಥಾಪಿಸಬೇಕು.

ಇಂತಹ ಕೆಲವು ಮಂತವ್ಯಗಳನ್ನು ಆಧಾರವಾಗಿಟ್ಟುಕೊಂಡು ನಾವು ನಮ್ಮನ್ನು ಸಂಘಟಿತಗೊಳಿಸಿ ಭವಿಷ್ಯತ್ಕಾಲದ ಆಹ್ವಾನ (ಕರೆ) ವನ್ನೆದುರಿಸಲು ಸಮರ್ಥರಾದೇವೆಂದು ನನ್ನ ಮತ್ತು ನನ್ನ ಕ್ಷೇತ್ರದಲ್ಲಿ ಕಾರ್ಯಮಾಡುವ ಸಹಯೋಗಿಗಳಿಗೆ ಪೂರ್ಣ ನಂಬಿಕೆಯಿದೆ.

---

## ಹೇ ಪ್ರಭೋ! ನಮಗೆ ಉತ್ಸಾಹ ಬಲಗಳನ್ನು ದಯಪಾಲಿಸು

● ಪಂ। ಸುರೇಶಚಂದ್ರ ವೇದಾಲಂಕಾರ, ಎಂ. ಎ. ಎಲ್. ಟಿ.

**ಭದ್ರಂ ನೋ ಅಪಿವಾತಯ ಮನೋ ದಕ್ಷಮುತ ಕ್ರತುಂ ॥**

[ಋಕ್ ೧೦|೨೫|೧]

ಹೇ ಪ್ರಭೋ! (ನಃ) ನಮಗೆ (ಭದ್ರಂ) ಶ್ರೇಷ್ಠವಾದ (ಮನಃ) ಮಾನಸಿಕ ಉತ್ಸಾಹವನ್ನೂ (ದಕ್ಷಂ) ದಕ್ಷತೆ ಅಥವಾ ಬಲವನ್ನೂ (ಕ್ರತುಂ) ಕರ್ಮವನ್ನೂ (ಅಪಿ ವಾತಯ) ದಯಪಾಲಿಸು.

**ಪ್ರೇಹ್ಯಭೀಹಿ ಧೃಷ್ಣುಹಿ ನ ತೇ ವಜ್ರೋ ನಿಯಂಸತೇ ।**
**ಇಂದ್ರ ನೃಮ್ಣಂ ಹಿ ತೇ ಶವೋ, ಹನೋ ವೃತ್ರಂ**
**ಜಯಾ ಅಪೋಽರ್ಚನ್ನನು ಸ್ವರಾಜ್ಯಂ ॥** [ಋಕ್ ೧|೮೦|೩]

(ಸ ಇಹಿ) ಹೇ ವೀರ! ಮುಂದರಿಯು. (ಅಭಿ ಇಹಿ) ಆಕ್ರಮಣ ಮಾಡು. (ತೇ ವಜ್ರಃ) ನಿನ್ನ ಶಸ್ತ್ರವನ್ನು (ನ ನಿಯಂಸತೇ) ಯಾರೂ ತಡೆಗಟ್ಟಲಾರರು. (ಇಂದ್ರ) ಹೇ ಇಂದ್ರ, ವೀರ! (ತೇ ಶವಃ) ನಿನ್ನ ಬಲವು (ನೃಮ್ಣಂ) ಶತ್ರುವನ್ನು ತಡೆಗಟ್ಟುತ್ತದೆ, ಸೋಲಿಸುತ್ತದೆ.(ವೃತ್ರಂ) ದುಷ್ಟನನ್ನು (ಹನ:) ಸದೆಬಡೆಯು. (ಅಪ:) ಪ್ರಜೆಗಳನ್ನು (ಜಯಾ:) ಗೆಲ್ಲು, (ಸ್ವರಾಜ್ಯಂ ಅನು ಅರ್ಚನ್ ಭವ) ಸ್ವರಾಜ್ಯವನ್ನು ಆರಾಧಿಸುವವನಾಗು.

ಇಂದು ನಾವು ಮೇಲಿನ ಎರಡು ಮಂತ್ರಗಳನ್ನು ವಿವೇಚಿಸೋಣ.

ವೇದವು ಸಮಸ್ತ ಸತ್ಯ ವಿದ್ಯೆಗಳ ಭಂಡಾರವು. ವೇದವು ಸ್ಫಟಿಕ ಮಣಿಗಿಂತ ಉಜ್ವಲವೂ, ಪಾರಿಜಾತಕ್ಕಿಂತ ಹೆಚ್ಚು ಸುಗಂಧಮಯವೂ ಆಗಿದೆ. ವೇದದ ಒಂದು ಮಂತ್ರದಲ್ಲಿ ವೀರರ ಅದ್ಭುತ ಹುಂಕಾರವಿದೆ. ಇನ್ನೊಂದರಲ್ಲಿ ಲಕ್ಷ್ಮಿಯ ಮಧುರ ಸ್ಮಿತವಿದೆ, ಮತ್ತೊಂದರಲ್ಲಿ ವೃಂದಾವನದ ಪ್ರೇಮ ಪ್ರವಾಹವಿದೆ, ಮಗುದೊಂದರಲ್ಲಿ ಬ್ರಹ್ಮ-ದ್ರವದ ಲಲಿತ ವಿಲಾಸವಿದೆ. ಭಗವತೀ ಶ್ರುತಿ ದೇವಿಯು ಯಾವುದನ್ನು ಸ್ಪರ್ಶ ಮಾಡುತ್ತಾಳೋ ಅದು ಅಮೃತಕ್ಕಿಂತಲೂ ಹೆಚ್ಚು ಮಧುರವಾಗುತ್ತದೆ, ಅವಳ ದೃಷ್ಟಿಯ ಲಕ್ಷ್ಯವು ತಿಂಗಳು ಬೆಳಕಿಗಿಂತಲೂ ಹೆಚ್ಚು ನಿರ್ಮಲವಾಗುತ್ತದೆ. ಅವಳ ಪಾದ ಪದ್ಮಗಳೂರಲ್ಪಟ್ಟ ವಸ್ತು ಪದ್ಮರಾಗ ಮಣಿಗಿಂತಲೂ ಹೆಚ್ಚು ಬೆಲೆಬಾಳುವ ವಸ್ತುವಾಗುತ್ತದೆ.

ಈ ಜೀವನವೊಂದು ಸಂಗ್ರಾಮವು. ನಾಲ್ಕೂ ಕಡೆ ವಿಘ್ನ ಬಾಧೆಗಳಿವೆ. ಶತ್ರುಗಳು ಬಾಯಿ ಬಿಟ್ಟು ನುಂಗಲು ಹವಣಿಸುತ್ತಿದ್ದಾರೆ. ಆಂತರಿಕ ಕ್ಷೇತ್ರದ ಕಾಮ, ಕ್ರೋಧ, ಲೋಭ, ಮೋಹ, ಮತ್ಸರ ಮೊದಲಾದುವುಗಳ ಪಿಶಾಚ ಸೇನೆ ಮನಸ್ಸಿನ ಮೇಲೆ ಆಕ್ರಮಣ ಮಾಡಲು ಸನ್ನದ್ಧವಾಗಿವೆಯಾದರೆ ಹೊರಗಣ ಶರೀರವನ್ನು ನುಂಗಲು ರೋಗಗಳು ಸೈನ್ಯ ಯೋಜನಾಬದ್ಧವಾಗಿ ಮುಂದುವರಿಯುತ್ತಿದೆ. ಒಂದೆಡೆ ಹುಲಿ, ಸಿಂಹ, ಹಾವು, ಚೇಳು ಮೊದಲಾದ ಹಿಂಸ್ರ ಪ್ರಾಣಿಗಳು ನಾಲಿಗೆಯನ್ನು ಮಸೆದು ತಮ್ಮ ಭೋಜನವನ್ನು ಎದುರು ನೋಡುತ್ತಿದ್ದರೆ ಇನ್ನೊಂದೆಡೆ ಅತಿವೃಷ್ಟಿ, ಅನಾವೃಷ್ಟಿ, ಭೂಕಂಪ ಮೊದಲಾದ ದೈವೀ ವಿಪತ್ತುಗಳು ಅವನನ್ನು ನುಂಗಲೆಳಸುತ್ತವೆ. ಅಲ್ಲಿ ಇಲ್ಲಿ ಸೇರಿಕೊಂಡ ಆತತಾಯಿಗಳು ಅವನ ಕತ್ತನ್ನು ತಮ್ಮ ಖಡ್ಗಕ್ಕೆ ಲಕ್ಷ್ಯ ಮಾಡಬಯಸುತ್ತಿದ್ದಾರೆ, ಅವನನ್ನು ಗುಲಾಮನನ್ನಾಗಿ ಮಾಡಲೂ, ಅವನ ಮಕ್ಕಳು ಮರಿಗಳನ್ನು ಸತಾಯಿಸಲೂ, ಧನ ಸಂಪತ್ತು ಮತ್ತು ಜಮೀನನ್ನು ಕಬಳಾಯಿಸಲೂ ತತ್ಪರರಾಗಿದ್ದಾರೆ. ಎತ್ತ ನೋಡಿದರಲ್ಲಿ ಕಷ್ಟಗಳು, ಮಾರ್ಗದಲ್ಲಿ ಚೂಪಾದ ಬಂಡೆಗಳು ಹಾಗೂ ಹೆಜ್ಜೆ ಹೆಜ್ಜೆಗಳಲ್ಲಿ ಕಂದಕಗಳು, ಮಾನವ ನಿರಾಶನಾಗುತ್ತಾನೆ. ಈ ನಿರಾಶೆಯನ್ನು ಹೋಗಲಾಡಿಸಲಿಕ್ಕಾಗಿ ಅವನಲ್ಲಿ ಉತ್ಸಾಹ, ಬಲ ಮತ್ತು ಕರ್ಮವನ್ನು ತಂದುಕೊಳ್ಳಲು ವೇದವು ಈ ಮಂತ್ರಗಳಲ್ಲಿ ಸಂದೇಶವಿತ್ತಿದೆ. "ಹೇ ವೀರ! ಎದ್ದೇಳು, ಮುಂದುವರಿಯು, ಈ ಆಂತರಿಕ ಹಾಗೂ ಬಾಹ್ಯ ಶತ್ರುಗಳನ್ನು ಬುಡ ಸಹಿತ ಉನ್ಮೂಲನ ಮಾಡಲು ಎತ್ತಿದ ನಿನ್ನ ಶಸ್ತ್ರವನ್ನಾರೂ ತಡೆಯಲಾರರು. ನಿನ್ನ ಬಲವು ಶತ್ರುಗಳನ್ನು ಮೆಚ್ಚುವುದು. ನಿನ್ನ ಮಾರ್ಗದಲ್ಲಿ ಬರುವ ವಿಘ್ನ ಬಾಧೆಗಳನ್ನು ಕೆಡವಿ ನೀನು ಮುಂದಕ್ಕೆ ಅಡಿಯಿಡು, ಮುಂದುವರಿಯು. ಆರ್ಯನೆಂದಿಗೂ ನಿರಾಶನಾಗುವುದಿಲ್ಲ. ಅವನು ಶತ್ರುಗಳ ಮೇಲೆ ವಿಜಯವನ್ನು ಗಳಿಸುತ್ತಿರುತ್ತಾನೆ" ಎಂದು ವೇದವು ಹೇಳಿದೆ. ನದಿಯ ಪ್ರವಾಹವು ದಡಗಳನ್ನೂ, ಅಣೆಕಟ್ಟುಗಳನ್ನೂ ಕೆಡಹಿ, ಬಂಡೆಗಳನ್ನು ಹಿಂದಕ್ಕೆ ಹಾಕುತ್ತಾ ಮುಂದಕ್ಕೆ ಮುಂದೆಯೇ ಹೋಗುತ್ತಿರುವಂತೆ ನೀನೂ ನಿಲ್ಲದಿರು, ನಡೆ ಮುಂದೆ, ನಡೆ ಮುಂದೆ.

ವೀರರೆ! ಜಗತ್ತಿನಲ್ಲಿ ಸ್ವಾರ್ಥ, ತಿರಸ್ಕಾರ ಮತ್ತು ಅವಿಶ್ವಾಸಗಳು ಬೇರುಬಿಟ್ಟಿರುವುದು ನಿಮಗೆ ತೋರಬಹುದು. ನೀವು ಹೊಸತೊಂದು ಜಗತ್ತಿನ ನಿರ್ಮಾಣ ಮಾಡಬೇಕಾಗಿದೆ. ಆದಕ್ಕಾಗಿ ಸಹಯೋಗ, ಸಹಿಷ್ಣುತ್ವ ಮತ್ತು ಉತ್ಸಾಹವನ್ನು ನಿಮ್ಮಲ್ಲಿ ತುಂಬಿಕೊಳ್ಳಬೇಕಾಗಿದೆ. ಜಗತ್ತಿನ ಸರ್ವೋಚ್ಚ ಶಕ್ತಿಯಾದ ಪರಮಾತ್ಮನು ಜಗತ್ತನ್ನು ಸುಂದರವಾಗಿ ಮಾಡಬಲ್ಲನು, ಅವನು ನಮ್ಮನ್ನು ತನ್ನ ಸಾಧನವನ್ನಾಗಿ ಮಾಡಿರುವನು ಹಾಗೂ ಮಾನವನಲ್ಲಿ ಅವನು ಆ ರೀತಿ ಮಾಡಲು ಉತ್ಸಾಹ-ಬಲ—ಸಾಮರ್ಥ್ಯಗಳನ್ನು ತುಂಬಿಟ್ಟಿರುವನೆಂಬುದು ನಿಜವಾದ ಆಶಾವಾದಿಯ ಪ್ರಬಲ ನಂಬಿಕೆಯಾಗಿರುತ್ತದೆ.

ಪ್ರತಿಯೊಬ್ಬ ಮಾನವನ – ಅವನು ಮೇಧಾವಿಯಾಗಿರಲಿ, ಮೂರ್ಖನಾಗಿರಲಿ ಹೃದಯದಲ್ಲಿ ಏನಾದರೊಂದು ಸತ್ಕಾರ್ಯ ಮಾಡಿತೋರಿಸುವ ಶಕ್ತಿಯಿದೆ. ಸಾಮಾನ್ಯ ಅಬೋಧ ಗ್ರಾಮೀಣ ಫ್ರಾನ್ಸೀಸೀ ಹುಡುಗಿ ಜಾನ್ ದ ಆರ್ಕ್‌ಳ ಪವಿತ್ರ ಖಡ್ಗವೂ, ಅವಳ ಪೂಜ್ಯ ಪತಾಕೆ ಹಾಗೂ ಮಹತ್ತಾದೊಂದು ಕಾರ್ಯವನ್ನೆಸಗುವ ವಿಶ್ವಾಸ-ಉತ್ಸಾಹಗಳು ಫ್ರಾನ್ಸಿನ ಸ್ವಾತಂತ್ರ್ಯವನ್ನು ಕಾಪಾಡಿ ತೋರಿಸಿದವು. ಉತ್ಸಾಹ ಸಂಪನ್ನ ಯುವಕನು

ಎಲ್ಲಾ ಸಂಕಟಗಳನ್ನು ಎದುರಿಸಬಲ್ಲನು. ಅಲೆಕ್ಸಾಂಡರನು ಉತ್ಸಾಹದ ಮೂಲಕವೇ ಯೂರೋಪು ಮತ್ತು ಏಷ್ಯಾವನ್ನು ಜಯಿಸುವ ಸಂಕಲ್ಪ ಮಾಡಿದನು. ರೋ ಮುಂಸನು ಉತ್ಸಾಹ ಬಲದಿಂದಲೇ ರೋಮ ಸಾಮ್ರಾಜ್ಯದ ತಳಹದಿಯನ್ನಿಟ್ಟನು. ನೆಪೋಲಿಯನನು ಉತ್ಸಾಹದ ಬಲದಿಂದಲೇ ಆಲ್ಪ್ಸ ಪರ್ವತಗಳನ್ನು ದಾಟಿ ರೋಮ ದೇಶದ ಮೇಲೆ ತನ್ನ ಧ್ವಜ ವನ್ನೂರಿದನು. ನ್ಯೂಟನನು ಉತ್ಸಾಹ ಬಲದಿಂದಲೇ ೨೨ನೇ ವಯಸ್ಸಿನಲ್ಲಿ ಮಹಾನ್ ಆವಿ ಷ್ಕಾರಗಳನ್ನು ಮಾಡಿ ತೋರಿಸಿದನು.

ನಿರಾಶೆ ಮಾನವನ ಅತಿ ದೊಡ್ಡ ನಿರ್ಬಲತೆಯು. ಶಿಥಿಲತೆಯು ಜೀವನವನ್ನು ಪ್ರತಿಬಿಂಬಿಸುವ ಮೂರ್ತಿಗಳನ್ನು ನಿರ್ಮಿಸಲಾರದು, ಪ್ರಾಕೃತಿಕ ಶಕ್ತಿಗಳ ಮೇಲೆಂದೂ ಅಧಿ ಕಾರವನ್ನು ಮಾಡಲಾರದು. ಉತ್ಸಾಹವು ಆಯಸ್ಕಾಂತದ ಸೂಜಿಯನ್ನು ದಿಕ್ಚಕ್ರದಲ್ಲಿ ಟ್ಟಿದೆ. ಅದುವೇ ಮೊಟ್ಟಮೊದಲು ಮುದ್ರಣ ಯಂತ್ರವನ್ನು ನಡೆಸಿತು. ಗೆಲಿಲಿಯೋವಿನ ದೂರವೀಕ್ಷಣ ನಳ್ಳಿಗಳನ್ನು ತಯಾರಿಸಿತು, ಅವೇ ಒಂದೊಂದಾಗಿ ಹೊಸಹೊಸ ಲೋಕಗಳನ್ನು ತೋರಿಸಿದವು. ಪಾಳಗಳನ್ನು ಹರಡಿತು. ಅವು ತೂಫಾನನ್ನೆದುರಿಸುತ್ತಾ ಕೊಲಂಬಸನನ್ನು ಬಹಾಮ (ಅಮೆರಿಕಾ) ಕೊಂಡೊಯ್ದವು. ಉತ್ಸಾಹವೇ ಕೈಗಳಲ್ಲಿ ಶಸ್ತ್ರಗಳನ್ನೆತ್ತಿ ಸ್ವಾತಂತ್ರ್ಯ ಯುದ್ಧವನ್ನು ಮಾಡಿತು, ಕೊಡಲಿಯಿಂದ ಭೀಷಣ ವನಗಳನ್ನು ನೆಲಕ್ಕೆರಗಿಸಿತು. ಅದುವೇ ಕಾಂಗಡಿಯ ಭಯಂಕರ ಕಾಡುಗಳಲ್ಲಿ ಗುರುಕುಲ ಕಾಂಗಡಿಯ ಸ್ಥಾಪನೆ ಮಾಡಿ ಮುಂದೆ ರೌಲೆಟ್ ಆಕ್ಟಿಗೆ ವಿರುದ್ಧವಾಗಿ ಹೊರಟ ಮೆರವಣಿಗೆಯ ನೇತೃತ್ವ ವಹಿಸುತ್ತಾ ಚಾಂದನೀ ಚೌಕದಲ್ಲಿ ಇಂಗ್ಲೀಷರ ಸಶಕ್ತ ಸೈನ್ಯದೆದುರಿನಲ್ಲಿ ಸ್ವಾಮೀ ಶ್ರದ್ಧಾನಂದರಿಗೆ ಎದೆ ಬಿಚ್ಚಿ ಎದುರು ನಿಲ್ಲಲು ಸಾಹಸವಿತ್ತಿತು. ಈ ಉತ್ಸಾಹವೇ ದೇಶದಲ್ಲಿ ಹರಡಿದ ಅಂಧ ವಿಶ್ವಾಸ, ಪಾಷಂಡತನ, ಅನಾಚಾರ ಮತ್ತು ಪಾರತಂತ್ರ್ಯವನ್ನು ಒಂಟಿಯಾಗಿಯೇ ಎದುರಿ ಸುವ ಬಲವನ್ನು ಸ್ವಾಮೀ ದಯಾನಂದರ ಹೃದಯದಲ್ಲಿ ಮೂಡಿಸಿತ್ತು.

ಉತ್ಸಾಹವೇ ಮಾನವ ಜೀವನದಲ್ಲಿ ಈಶ್ವರತ್ವಕ್ಕೆ ಪ್ರಮಾಣವಾದ ಉಜ್ಜ್ವಲ ಜ್ಯೋತಿಯಾಗಿದೆ. ಇದರ ಅಭಾವವೇ ಜೀವನದಲ್ಲಿನ ಎಲ್ಲಾ ಆಪತ್ತುಗಳ, ದುಃಖಗಳ ಹಾಗೂ ಅಧಿಕಾಂಶ ಅಸಫಲತೆಗಳ ಕಾರಣವಾಗಿದೆ.

ವೇದ ಮಂತ್ರ ತಾತ್ಪರ್ಯವಿದೇ—ಹೇ ಮನುಷ್ಯ! ನೀನು ದುಃಖಿಯೂ ನಿರಾಶನೂ ಏಕಾಗಿರುವಿಯೆ? ನೆನಪಿಟ್ಟರು, ನಿನಗೆ ಜನ್ಮವಿತ್ತ ಭಗವಂತನಿಗೆ ನೀನು ನಿರಾಶನೂ, ದುಃಖ ವಂತನೂ ಆಗಿರುವುದು ಸ್ವೀಕಾರವಾಗಿಲ್ಲ. ಈಶ್ವರನು ನಮ್ಮನ್ನು ಸಫಲತೆ ಹಾಗೂ ವಿಜಯ ವನ್ನು ಗಳಿಸುವುದಕ್ಕಾಗಿ ಉಂಟುಮಾಡಿರುವನು. ನಿಮ್ಮ ಜೀವನದ ಮಹತ್ತಾದ ಉದ್ದೇಶ್ಯ ವನ್ನು ಅಲ್ಲಗಳೆಯದಿರಿ. ಈ ರೀತಿ ನಿರಾಶ ಮತ್ತು ಉದಾಸೀನ ಮೋರೆ ಹಿಡಿದು ಎಲ್ಲರ ಎದುರಿನಲ್ಲಿ ಹೋಗಲು ನಿಮಗೆ ನಾಚಿಕೆಯಾಗುವುದಿಲ್ಲವೆ ?

ರವೀಂದ್ರನಾಥ ಠಾಕುರರು ಸರಿಯಾಗಿಯೇ ಬರೆದಿದ್ದಾರೆ-ಭಗವಂತನು ಹೂವಿನಿಂದ ತಾನು ಕೊಟ್ಟ ಸುಗಂಧವನ್ನೂ ಬಣ್ಣವನ್ನೂ ಅಪೇಕ್ಷಿಸುತ್ತಾನೆ. ಕೋಗಿಲೆಯಿಂದ ಕುಹೂ ಕುಹೂ ಶಬ್ದವನ್ನಪೇಕ್ಷಿಸುತ್ತಾನೆ. ವೃಕ್ಷದಿಂದ ಫಲದ ಅಪೇಕ್ಷೆಯಿದೆ. ಆದರೆ, ಮಾನವನ ವಿಷಯದಲ್ಲಿ ಈ ಮಾತು ಬೇರೆಯೇ ಆಗಿದೆ. ಮಾನವನಿಗೆ ಅವನು ದುಃಖವನಿತ್ತಿರುವನು.

ತನ್ಮೂಲಕ ಮಾನವನು ಸುಖ ಪಡೆಯಲೆಂಬ ಅಪೇಕ್ಷೆಯಿದೆ. ಮಾನವನಿಗೆ ಪ್ರಕಾಶವನ್ನು ಪಡೆಯಲಿಕ್ಕಾಗಿ ಅಂಧಕಾರವನ್ನಿತ್ತಿರುವನು. ಮಾನವನನ್ನು ಮರ್ತ್ಯನನ್ನಾಗಿ ಮಾಡಿ ಅದರ ಮೂಲಕ ಅಮೃತತ್ವವನ್ನು ಪಡೆಯಲು ಉಪದೇಶಿಸಿರುವನು. ಮಾತ್ರವಲ್ಲ, ಅಸತ್ತಿನಿಂದ ಸತ್, ವಿಷದಿಂದ ಅಮೃತ ಮತ್ತು ಅಮಂಗಳದಿಂದ ಮಂಗಳವನ್ನು ನಿರ್ಮಿಸಬೇಕೆಂದು ಹೇಳಿರುವನು.

ಆದುದರಿಂದಲೇ ಈ ಮಂತ್ರ ಹೇಳುತ್ತಿದೆ – ಹೇ ವೀರ! ಜೀವನ ಸಂಘರ್ಷದಲ್ಲಿ ಕಠೋರ ಶ್ರಮವಹಿಸಿ ವಿಜಯಿಯಾಗು.

---

## ಕಾಮ ಕ್ರೋಧಗಳನ್ನು ಗೆಲ್ಲುವ ಉಪಾಯ — ಸಂಯಮ

ಮನುಸ್ಮೃತಿಯ ಏಳನೆಯ ಅಧ್ಯಾಯದ ೪೩ರಿಂದ ೫೩ರ ವರೆಗಿನ ಶ್ಲೋಕಗಳಲ್ಲಿ ಕಾಮಜ ಮತ್ತು ಕ್ರೋಧಜ ಎಂದು ಪಾಪಗಳನ್ನು ಎರಡು ವಿಭಾಗವಾಗಿ ಮಾಡಿರುವರು. ಪ್ರತಿಯೊಂದರಲ್ಲಿಯೂ ಹತ್ತು ಪಾಪಗಳನ್ನು ಎಣಿಸಿರುವರು- ಕಾಮಜ ಪಾಪಗಳಲ್ಲಿ ನಾಲ್ಕೂ, ಕ್ರೋಧಜ ಪಾಪಗಳಲ್ಲಿ ಮೂರೂ ಮುಖ್ಯವಾಗಿವೆ. ಮುಖ್ಯವಾದ ಕಾಮಜ ಪಾಪಗಳಿವು–ಮದಕಾರಕ ದ್ರವ್ಯ ಸೇವನ, ಜೂಜಾಡುವುದು, ನಾರೀ ಸಂಗ ಮತ್ತು ಅಶ್ಲೀಲ ನೃತ್ಯ ಗೀತಗಳು ಹಾಗೂ ಉಡಾಳತನ. ಕ್ರೋಧಜ ಮುಖ್ಯ ಪಾಪಗಳಿವು–ನಿರಪರಾಧಿಗಳನ್ನು ದಂಡಿಸುವುದು, ಕಠೋರ ಮಾತನ್ನಾಡುವುದು ಅಥವಾ ಚಾಡಿ ಹೇಳುವುದು ಮತ್ತು ಅನ್ಯಾಯ ದಿಂದ ಹಣ ಗಳಿಸುವುದು, ಈ ಎರಡೂ ವಿಧವಾದ ಪಾಪಗಳನ್ನು ನರಕದ ಹೆಬ್ಬಾಗಿಲೆಂದು ವರ್ಣಿಸಿದ್ದಾರೆ.

ಭಾರತೀಯ ಸಂಸ್ಕೃತಿಯ ಪ್ರಕಾರ ತಪಸ್ಸು, ಸಂಯಮ ಮತ್ತು ಬ್ರಹ್ಮಚರ್ಯ ನಿಯಮಗಳನ್ನು ಪಾಲಿಸುತ್ತಾ ಆರನೇ ಮತ್ತು ಎಂಟನೇ ವರ್ಷದಿಂದ ಬಾಲಕ ಬಾಲಿಕೆಯರು ಬೇರೆ ಬೇರೆ ಪಾಠಶಾಲೆಗಳಲ್ಲಿ ವಿದ್ಯಾಧ್ಯಯನ ಮಾಡಬೇಕೆಂಬ ವಿಧಾನವಿದೆ. ಅಥರ್ವ ವೇದದ ಪ್ರಕಾರ 'ಬ್ರಹ್ಮಚರ್ಯ ಮತ್ತು ತಪಸ್ಸಿನಿಂದ ವಿದ್ವಾಂಸರು ಮೃತ್ಯುವನ್ನು ಜಯಿಸುತ್ತಾರೆಂದೂ, 'ಬ್ರಹ್ಮಚರ್ಯ ಮತ್ತು ತಪಸ್ಸಿನ ಮೂಲಕ ಜಿತೇಂದ್ರಿಯನಾಗಿ ರಾಜ್ಯವನ್ನಾಳುವ ರಾಜನೇ ಉತ್ತಮನಾಗಿದ್ದಾನೆ'ಂದೂ ಹೇಳಿದೆ.

ಆದಿತ್ಯ ಬ್ರಹ್ಮಚಾರೀ ಋಷಿ ದಯಾನಂದರು–"ನೋಡಿರಿ, ಯಾವನ ಶರೀರದಲ್ಲಿ ಸುರಕ್ಷಿತವಾದ ವೀರ್ಯವಿರುತ್ತದೋ, ಅವನಿಗೆ ಆರೋಗ್ಯ, ಬುದ್ಧಿ, ಬಲ, ಪರಾಕ್ರಮಗಳು ಹೆಚ್ಚಿ ಬಹಳ ಸುಖವು ಲಭಿಸುತ್ತದೆ- ಇದರ ಸಂರಕ್ಷಣೆಯ ವಿಧಾನ ಇದೇ ಆಗಿದೆ. ವಿಷಯಗಳ ಕಥೆ, ವಿಷಯಾಸಕ್ತ ಜನರ ಸಂಗ, ವಿಷಯಗಳ ಧ್ಯಾನ, ನಾರಿಯ ದರ್ಶನ, ಏಕಾಂತ ನಿವಾಸ, ಸಂಭಾಷಣ ಮತ್ತು ಸ್ಪರ್ಶ ಮೊದಲಾದ ಕರ್ಮದಿಂದ ಬ್ರಹ್ಮಚಾರಿಗಳು ಬೇರೆಯಿದ್ದು, ಉತ್ತಮ ಶಿಕ್ಷಣ ಮತ್ತು ಪೂರ್ಣ ವಿದ್ಯೆಯನ್ನು ಗಳಿಸಬೇಕು. ಯಾವನ

ಶರೀರದಲ್ಲಿ ವೀರ್ಯವಿರುವುದಿಲ್ಲವೋ ಅವನು ಆರೋಗ್ಯ, ಬಲ, ಬುದ್ಧಿ ಹಾಗೂ ಪರಾಕ್ರಮ ದಿಂದ ರಹಿತನಾಗಿ ನಾಶವಾಗುತ್ತಾನೆ. (ಸತ್ಯಾರ್ಥ ಪ್ರಕಾಶ ದ್ವಿತೀಯ ಸಮುಲ್ಲಾಸ)

ಇಂದಿನ ಅರ್ಥ-ಕಾಮ ಪ್ರಧಾನ ಯುಗದಲ್ಲಿ ಮೇಲಿನ ಮಾತುಗಳು ಈ ಪೀಳಿಗೆಯ ವಾಚಕರಿಗೆ ಹೇಗೇಗೋ ತೋರುತ್ತವೆ. ಮನುಸ್ಮೃತಿಯಲ್ಲಿ ಹೇಳಿದ್ದಾರೆ—

**ಕಾಮಾತ್ಮತಾ ನ ಪ್ರಶಸ್ತಾ ನ ಚೈವೇಹಾಸ್ತ್ಯಕಾಮತಾ ।**
**ಕಾಮ್ಯೋಹಿ ವೇದಾಧಿಗಮಃ ಕರ್ಮಯೋಗಶ್ಚ ವೈದಿಕಃ ॥೨।೨॥**

ಅಂದರೆ, ಅತ್ಯಂತ ಕಾಮಾತುರತೆಯಾಗಲೀ, ನಿಷ್ಕಾಮತ್ವವಾಗಲೀ, ಯಾರಿಗೂ ಶ್ರೇಷ್ಠವಲ್ಲ. ಏಕೆಂದರೆ ಯಾರಾದರೂ ಕಾಮನೆ ಮಾಡದಿದ್ದಲ್ಲಿ ಯಾರೂ ವೇದ ಜ್ಞಾನ ವನ್ನು ಪಡೆಯಲಿಕ್ಕೂ ವೇದವಿಹಿತ ಕರ್ಮಗಳನ್ನು ಆಚರಿಸಲಿಕ್ಕೂ ಸಿದ್ಧರಾಗಲಾರರು. ಆದುದರಿಂದ ಮನುವು ೨।೩ರಲ್ಲಿ ಸತ್ಯ, ವ್ರತ, ಹೋಮ, ಯಜ್ಞ ಮತ್ತು ಮಹಾಯಜ್ಞ ಗಳೊಂದಿಗೆ ಆತ್ಮಸಂತೋಷವನ್ನೂ ಸಹ ವೇದಗಳ ಹಾಗೂ ಪರಮೇಶ್ವರನ ಭಕ್ತಿಯ ಆಧಾರ ವೆಂದು ಹೇಳಿರುವನು.

ಪಾಶ್ಚಾತ್ಯ ದೇಶಗಳಲ್ಲಿ ತ್ವರಿತಗತಿಯಿಂದಾಗುವ ಉನ್ಮುಕ್ತ ಹಾಗೂ ಸಂಯಮ ಹೀನ ಜೀವನದ ತಾಂಡವ ನೃತ್ಯದ ಅನುಕರಣವಿಂದು ನಮ್ಮ ದೇಶದಲ್ಲಿಯೂ ಹೆಚ್ಚುತ್ತಲಿದೆ. ಫ್ರೈಡ್ ಪಂಥಿಗಳಂತೂ ಶಿಶುವು ತಾಯಿಯ ಸ್ತನ್ಯಪಾನ ಮಾಡುವಲ್ಲಿಯೂ ಕಾಮವಾಸನೆಯ ಪರಿಚಯವೀಯುತ್ತದೆಂದು ಹೇಳುತ್ತಾರೆ. ಯುರೋಪಿನ ಅನೇಕ ದೇಶಗಳಲ್ಲಿ ನೂರಾರು ಪರಿವಾರಗಳಿಂದು ಯಾವುದೇ ಸಾಮಾಜಿಕ ಮರ್ಯಾದೆಗಳಿಗೆ ಕಟ್ಟು ಬೀಳದೆ ಪತಿಪತ್ನಿಯ ರಂತೆ ಇದ್ದು ಜೀವನ ನಡೆಸುತ್ತಿದ್ದಾರೆ. ಮಾತ್ರವಲ್ಲ, ಸಾರ್ವಜನಿಕ ಸ್ಥಾನಗಳಲ್ಲಿ ನಗ್ನತೆ, ಚುಂಬನ, ಆಲಿಂಗನಾದಿ ಕ್ರಿಯಾಕಲಾಪಗಳಲ್ಲಿ ತೊಡಗಿರುತ್ತಾರೆ. ಇಂದು ಭಾರತದಲ್ಲಿಯೂ ಸಹ ಯುವಕ ಯುವತಿಯರು ಮಾತ್ರವೇ ಅಲ್ಲ, ಅರ್ಧ ಪ್ರಾಯ ಕಳೆದು ಕೊಂಡವರೂ ಸಹ ರೂಪ ವೇಷಗಳಲ್ಲಿ, ಆಗು ಹೋಗುಗಳಲ್ಲಿ ಹಿಪ್ಪೀ ಸಂಸ್ಕೃತಿಯನ್ನಪ್ಪಿಕೊಂಡುದನ್ನೂ ನಾವು ಕಾಣಬಹುದು. ಹಲವು ಸಲ ಅತ್ಯಂತ ಪರಿಚಿತ ಮಿತ್ರರನ್ನೂ ಸಹ ಈ ಹಿಪ್ಪೀ ವೇಷದಿಂದಾಗಿ ಗುರುತಿಸುವುದು ಅಸಂಭವವಾಗಿ ಬಿಡುತ್ತದೆ. ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳಲ್ಲದೆ ಆಫ್ರಿಕದ ಅನೇಕ ದೇಶಗಳಲ್ಲಿ ಹಿಪ್ಪಿಗಳನ್ನು ಕಾನೂನಿನ ಮೂಲಕ ಪ್ರವೇಶಿಸಲು ಪ್ರತಿಬಂಧಿಸ ಲಾಗಿದೆ. ಆದರೆ, ನಮ್ಮ ದೇಶದ ಉದಾರ ಸರಕಾರವು ಪರ್ಯಟನದ ಮೂಲಕ ಆಗುವ ಆರ್ಥಿಕ ಲಾಭದ ಕಾರಣದಿಂದಾಗಿ ಅವರ ಪ್ರವೇಶವನ್ನು ತಡೆಯುತ್ತಿಲ್ಲ. ತತ್ಪರಿಣಾಮವಾಗಿ ಅಮಲು-ಔಷಧಗಳು, ವಿದೇಶಗಳಿಂದ ಕಳ್ಳ ಸಾಗಾಣಿಕೆಯಿಂದ ಬರುವ ಸಾಮಾನುಗಳು, ಭಾರತದಿಂದ ಚಿನ್ನ, ಬೆಳ್ಳಿ ಮತ್ತು ಇತರ ರತ್ನಗಳು ಗುಪ್ತರೂಪವಾಗಿ ಎಷ್ಟೊಂದು ವ್ಯವಸ್ಥಿತ ರೂಪವಾಗಿ ಸಾಗಿಸಲ್ಪಡುತ್ತಿವೆಯೆಂದರೆ ನಮ್ಮ ಇಡೀ ಆರ್ಥಿಕ ವ್ಯವಸ್ಥೆ ಹಾಳಾಗಿಬಿಟ್ಟಿದೆ.

ವಿದೇಶಗಳಲ್ಲಿ ಉನ್ಮುಕ್ತ ಸೆಕ್ಸ್‌ನ ಕಾರಣದಿಂದಾಗಿ ಪ್ರಾರಂಭವಾದ ಸಮಲಿಂಗೀ ವ್ಯಭಿಚಾರವು ಇನ್ನೂ ಬೀಭತ್ಸವಾಗಿದೆ. ಆ ದೇಶಗಳ ಮಹಾಮಹಾ ಅಧಿಕಾರಿಗಳೂ, ಮಂತ್ರಿಗಳೂ, ರಾಜದೂತರು, ವ್ಯಾಪಾರಿಗಳೂ ಈ ನಿರ್ಲಜ್ಜ ವ್ಯಸನಕ್ಕೆ ಜನಸಾಮಾನ್ಯರಿ ಗಿಂತ ಹೆಚ್ಚಾಗಿ ಬಲಿಬಿದ್ದಿದ್ದಾರೆ.

ಪ್ರಾಚೀನ ಭಾರತದಲ್ಲಿ ಈ ಅನಿಯಂತ್ರಿತ ಕಾಮಾಚಾರವನ್ನು ಬಹಳ ಕೆಟ್ಟದೆಂದು ಭಾವಿಸಿದ್ದರು. ಮಹಾಭಾರತದ ಉದ್ಯೋಗ ಪರ್ವದಲ್ಲಿ ಬರುವ ಇಂದ್ರ, ಶಚೀ ಮತ್ತು ನಹುಷ-ಇವರ ಕಥೆಯಿಂದ ಆ ಮಾತು ಸ್ಪಷ್ಟವಾಗುತ್ತದೆ. ಸ್ವರ್ಗದ ರಾಜನಾದ ಇಂದ್ರನು ಎರಡು ಪ್ರಾಯಶ್ಚಿತ್ತ ಯೋಗ್ಯವಾದ ಬ್ರಹ್ಮಹತ್ಯೆ ಮಾಡಿ ಪತ್ನಿಗೂ, ಇತರ ದೇವತೆಗಳಿಗೂ ಹೇಳದೆ ಎಲ್ಲೋ ಅವಿತು ಪ್ರಾಯಶ್ಚಿತ್ತ ಮಾಡಲು ಹೋದನು. ಎಲ್ಲಾ ಕಡೆ ಹುಡುಕಿದರೂ ಸಿಕ್ಕದಿದ್ದಾಗ ದೇವತೆಗಳೆಲ್ಲ ಸೇರಿ ನಹುಷನ ಹತ್ತಿರ ಹೋಗಿ ಸ್ವರ್ಗದ ರಾಜ ಪದವಿಯನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿದರು. ನಹುಷನು ಮೊದಲು ತನ್ನನ್ನು ಯೋಗ್ಯನಲ್ಲವೆಂದು ವಿರೋಧಿಸಿದರೂ ಕೊನೆಗೆ ಒತ್ತಾಯಕ್ಕೆ ಅಲ್ಲಗಳೆಯಲಾರದೆ ಹೋದನು. ನಹುಷನು ತೇಜಸ್ವಿ ಮತ್ತು ಬಲಶಾಲಿ ಆಗಿದ್ದನಾದರೂ ಅವನಲ್ಲೊಂದು ದೊಡ್ಡ ದೋಷ ಅಥವಾ ನಿರ್ಬಲತೆಯಿತ್ತು. ಅವನು ಅಪ್ಸರೆಯರಲ್ಲಿಯೂ, ದೇವಕನ್ಯೆಯರಲ್ಲಿಯೂ ಆಸಕ್ತನಾದನು. ಒಂದು ದಿನ ಇಂದ್ರನ ಪತ್ನಿಯಾದ ಶಚಿಯನ್ನು ನೋಡಿ ಅವಳನ್ನು ಪಡೆಯಲು ತವಕಪಟ್ಟನು. ದೇವಸಭೆಯನ್ನು ಕರೆದು ಅವನು ದರ್ಪಾತಿರೇಕದಿಂದ ನುಡಿದನು- 'ನಾನೀಗ ಇಂದ್ರನ ಸ್ಥಾನದಲ್ಲಿ ಸ್ವರ್ಗಾಧಿಪತಿಯಾಗಿರುವುದರಿಂದ ಇಂದ್ರನಿಲ್ಲದಿರುವಾಗ ಅವನ ಪತ್ನಿಯ ಮೇಲೆ ನನಗೆ ಪೂರ್ಣ ಅಧಿಕಾರವಿದೆ. ಈ ಸಮಾಚಾರವು ಶಚಿಯ ಕಿವಿಗಳಲ್ಲಿ ಬಿದ್ದಾಗ ಅವಳು ಏನು ಮಾಡಬೇಕೆಂದು ದಿಕ್ಕು ತೋಚದೆ ಗುರುವಾದ ಬೃಹಸ್ಪತಿಯನ್ನು ಕಂಡು ಉಪಾಯ ಕೇಳಿದಾಗ ಆತ ಇವಳಿಗೆ ಅಭಯದಾನವನ್ನೀಯುತ್ತಾ ನೀನು ನನ್ನ ಹತ್ತಿರ ಬಂದಿದ್ದು ನನ್ನ ಪುತ್ರಿಯಂತಿರುವೆ. ಆದುದರಿಂದ ನಿನ್ನನ್ನು ಅವಶ್ಯವಾಗಿಯೂ ನಾನು ರಕ್ಷಿಸುತ್ತೇನೆ. ನೀನು ನಹುಷನಿಗೆ ನನಗೆ ಸ್ವಲ್ಪ ಸಮಯವನ್ನು ಕೊಡಬೇಕು. ಅನಂತರ ನಾನು ನಿಮ್ಮಾಜ್ಞೆಯನ್ನು ಪಾಲಿಸುತ್ತೇನೆಂದು ಹೇಳಿ ಕಳುಹಿಸು. ಶಚಿ ಹಾಗೆಯೇ ಮಾಡಿದಳು. ಆಗ ನಹುಷನಿಗೆ ಬಹಳ ಸಂತೋಷವಾಯಿತು. ಆದರೆ, ಕೆಲವು ದಿನಗಳ ಅನಂತರ ನಹುಷನು ಪುನಃ ಬೆದರಿಕೆ ಹಾಕಲನುವಾದನು. ಆಗ ಹೆದರಿದ ಶಚಿ ಪುನಃ ಗುರುಗಳ ಹತ್ತಿರ ಹೋದಾಗ ಈ ಸಲವೂ ಗುರುಗಳು ಉಪಾಯ ತೋರಿಸಿದರು.

ಶಚಿಯು ನಹುಷನಿಗೆ ಸಂದೇಶ ಕಳುಹಿಸಿದಳು-'ತಾವು ನನ್ನ ಮನೆಗೆ ಬನ್ನಿರಿ. ನಾನಿದನ್ನು ನನ್ನ ಅಹೋಭಾಗ್ಯವೆಂದು ತಿಳಿಯುವೆನು. ಆದರೆ, ಬೇರಾವ ದೇವತೆಯ ಹತ್ತಿರವೂ ಇಲ್ಲದ ವಾಹನವನ್ನೇರಿ ಬರಬೇಕು'. ಕಾಮಾಂಧ ನಹುಷನು ಈ ಸಂದೇಶವನ್ನು ಕೇಳಿ ಋಷಿಗಳನ್ನು ಕರೆದು, ತಾನು ಪಲ್ಲಕ್ಕಿಯಲ್ಲಿ ಕುಳಿತು ಆ ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗಲು ಋಷಿಗಳಿಗೆ ಆಜ್ಞೆಯಿತ್ತನು. ಗುರುಗಳಾದ ಬೃಹಸ್ಪತಿಯ ಯೋಜನೆಯ ಮೇರೆಗೆ ಅಗಸ್ತ್ಯ ಋಷಿಯ ಅನುಮತಿಯನ್ನು ಪಡೆದು ಋಷಿಗಳು ಪಲ್ಲಕ್ಕಿಯನ್ನು ಹೊತ್ತು ಶಚಿಯ ಮನೆಯತ್ತ ಹೊರಟರು. ಕಾಮಾಂಧ ನಹುಷನಾದರೋ ಬಹುಬೇಗನೇ ತಲಪಲು ತವಕ ಪಡುತ್ತಿದ್ದನು. ಕ್ರೋಧದಿಂದ ಅಗಸ್ತ್ಯ ಮುನಿಯ ತಲೆಯನ್ನು ಕಾಲಿನಿಂದ ಒದ್ದುಬಿಟ್ಟು 'ಬೇಗ ನಡೆ' ಎಂದನು.

ಅಗಸ್ತ್ಯ ಋಷಿಯು-'ಹೇ ಪಾಪಾತ್ಮ! ನೀನು ಕಾಮ ಮತ್ತು ಕ್ರೋಧವಶನಾಗಿ ನಿರ್ದೋಷನಾದ ತನ್ನ ತಲೆಯನ್ನು ಮೆಟ್ಟಿದ್ದೀಯೇ. ನಾನು ನಿನಗೆ ಶಾಪವನ್ನೀಯುತ್ತೇನೆ-

ನೀನು ಸ್ವರ್ಗಭ್ರಷ್ಟನಾಗಿ ಪೃಥ್ವಿಯ ಮೇಲೆ ಬಿದ್ದು ಅಧೋಗತಿಯನ್ನು ಹೊಂದು' ಎಂದನು-ನಹುಷನು ತತ್‌ಕ್ಷಣ ಭೂಮಿಯ ಮೇಲೆ ಸರ್ಪ ಜನ್ಮವನ್ನು ಪಡೆದನು.

ಅತ್ತ ಅಜ್ಞಾತವಾಸದಲ್ಲಿದ್ದು ಪ್ರಾಯಶ್ಚಿತ್ತವನ್ನು ಮಾಡುತ್ತಿರುವ ಇಂದ್ರನನ್ನು ದೇವತೆಗಳು ಹುಡುಕಿತೆಗೆದರು. ಆಗ ಪ್ರಾಯಶ್ಚಿತ್ತವೂ ಕೊನೆಗೊಂಡಿತ್ತು. ದೇವತೆಗಳು ಆತನನ್ನು ಮರ್ಯಾದೆಯಿಂದ ಕರೆದುಕೊಂಡು ಬಂದು ಸ್ವರ್ಗದ ಸಿಂಹಾಸನದ ಮೇಲೆ ಕೂಡಿಸಿದರು.

ಮಹಾಭಾರದ ಈ ಕತೆ ಮಾನವನ ಮಾನಸಿಕ ಸ್ಥಿತಿಯ ದ್ಯೋತಕವಾಗಿದೆ. ಕಾಮ ಕ್ರೋಧಗಳ ಜ್ವಾಲೆಗಳಲ್ಲಿ ಬಿದ್ದು ಮಾನವನು ಭಸ್ಮವಾಗುತ್ತಾನೆಂಬುದೇ ಈ ಕತೆಯ ಅಭಿಪ್ರಾಯವಾಗಿದೆ. ಮಹಾಕವಿ ಕಾಳಿದಾಸನ ಕುಮಾರ ಸಂಭವವೆಂಬ ಮಹಾ ಕಾವ್ಯದಲ್ಲಿ ಶಿವನು ತನ್ನ ಮೂರನೆಯ ಕಣ್ಣಿನಿಂದ ಕಾಮದೇವನನ್ನು ಸುಟ್ಟುಹಾಕಿದ ಹಾಗೆಯೇ ಮನುಷ್ಯನ ಅಂತಃಕರಣದಲ್ಲಿ ಜ್ಞಾನವೂ, ಜೀವನದಲ್ಲಿ ತಪಸ್ಸೂ ಉದಯವಾಗುವ ತನಕ ಕಾಮ ಕ್ರೋಧಗಳನ್ನು ಜಯಿಸಲಾರನು. ಈ ಸತ್ಯದಿಂದಲೇ ಮಾನವ ಜನಾಂಗದ ರಕ್ಷಣೆಯಾಗಬಲ್ಲುದು. ವೇದಗಳ ಉಪದೇಶವೂ ಹೀಗಿದೆ–

**ಉಲೂಕಯಾತಂ ಶುಶುಲೂಕ ಯಾತಂ**
**ಜಹಿ ಶ್ವಯಾತುಮುತ ಕೋಕಯಾತುಂ ।**
**ಸುಪರ್ಣ ಯಾತುಮುತ ಗೃಧ್ರಯಾತುಂ**
**ದೃಷದೇವ ಪ್ರಮೃಣ ರಕ್ಷ ಇಂದ್ರ ॥** [ಅಥರ್ವ ೮–೪–೨೨

ಅಂದರೆ, ಹೇ ಇಂದ್ರ ಆತ್ಮನೇ! ನೀನು ಗೂಗೆಯನಡಿಗೆ (ಅಂಧಕಾರ), ತೋಳನ ನಡಿಗೆ (ಕ್ರೂರತ್ವ, ಈರ್ಷ್ಯಾ-ದ್ವೇಷಗಳು) ನಾಯಿಯ ನಡೆ (ಸ್ವಜನ ದ್ವೇಷ, ಚಾಟುಕಾರತ್ವ) ಜಕ್ಕವಕ್ಕಿಯ ನಡೆ (ಕಾಮಾತುರತ್ವ), ಗರುಡನ ನಡೆ (ಅಹಂಕಾರ) ಹದ್ದಿನ ನಡೆ (ಲೋಭ) ಈ ಎಲ್ಲಾ ರಾಕ್ಷಸೀ ವೃತ್ತಿಗಳನ್ನು ಕಠೋರ ಸಾಧನೆಯ ಮೂಲಕ ಸದೆಬಡಿಯು,

---

**ವೇದ ವಿವೇಚನೆ**

# ಬ್ರಹ್ಮಜ್ಞಾನ ಪ್ರಾಪ್ತಿ

(ಆಚಾರ್ಯ ಸುರೇಂದ್ರದೇವ, ಎಂ.ಎ. ಪಿಎಚ್.ಡಿ, ಜಗದೀಶಪುರ, ಬಲಿಯಾ)

ಈಶೋಪನಿಷತ್ತಿನ ಒಂಭತ್ತನೇ ಮಂತ್ರದಲ್ಲಿ ಪರಬ್ರಹ್ಮ ಪ್ರಾಪ್ತಿಯ ಉಪಾಯಗಳನ್ನು ಹೇಳುತ್ತಾ ವಿದ್ಯೆಯ ಮತ್ತು ಅವಿದ್ಯೆಯ ವಿವೇಚನೆ ಮಾಡಿರುವರು. ಬ್ರಹ್ಮ ಪ್ರಾಪ್ತಿಯ ಸಾಧನವಾದ ಜ್ಞಾನವನ್ನು ವಿದ್ಯೆಯೆಂದೂ, ಸ್ವರ್ಗಾದಿ ಲೋಕಗಳ ಪ್ರಾಪ್ತಿ ಅಥವಾ ಇಹಲೋಕದಲ್ಲಿ ಲಭಿಸುವ ನಾನಾ ವಿಧವಾದ ಭೋಗಗಳ ಮತ್ತು ವೈಭವ ಪ್ರಾಪ್ತಿಯ ಸಾಧನವಾದ ಕರ್ಮವನ್ನು ಅವಿದ್ಯೆಯೆಂದೂ ಹೇಳಿರುವರು. ಜ್ಞಾನ, ಕರ್ಮ–ಈ ಎರಡೂ ಸಾಧನಗಳನ್ನು ಸರಿಯಾಗಿ ಅರಿತುಕೊಂಡು ಯುಕ್ತ ರೀತಿಯಲ್ಲಿ ಅನುಷ್ಠಾನ ಮಾಡುವವನೇ

ಆ ಫಲವನ್ನು ಪಡೆಯಲು ಸಮರ್ಥನಾಗುತ್ತಾನೆ. ಅಂದರೆ, ಜ್ಞಾನವೆಂಬ ಸಾಧನದ ಮೂಲಕ ಸಾಧಕನು ಆ ಪರಮಾತ್ಮನ ಪ್ರಾಪ್ತಿಯನ್ನು ಅಥವಾ ಅವನ ಆನಂದದ ಅನುಭವವನ್ನು ಮಾಡತೊಡಗುತ್ತಾನೆ. (ಜೀವಾತ್ಮನು ಸತ್ ಮತ್ತು ಚಿತ್ ಆಗಿದ್ದು ಪರಮಾತ್ಮನು ಸತ್, ಚಿತ್ ಮತ್ತು ಆನಂದಸ್ವರೂಪನಾಗಿದ್ದಾನೆ. ಆನಂದವೇ ಇವರಿಬ್ಬರನ್ನೂ ಬೇರ್ಪಡಿಸುವ ವಸ್ತುವಾಗಿದೆ.) ಕರ್ಮವೆಂಬ ಸಾಧನದ ಮೂಲಕ ಮಾನವನು ಸ್ವರ್ಗ ಅಥವಾ ಇಹಲೋಕದಲ್ಲಿ ವಿವಿಧ ಭೋಗಗಳನ್ನೂ, ವೈಭವಾದಿಗಳನ್ನೂ ಪಡೆಯುತ್ತಾನೆ.

ಈ ರೀತಿ ಜ್ಞಾನ ಮತ್ತು ಕರ್ಮ-ಇವೆರಡು ಸಾಧನಗಳಾದವು. ಇವನ್ನೇ ವಿದ್ಯೆ ಮತ್ತು ಅವಿದ್ಯೆಯೆಂದು ಹೇಳಿದರು. ಈ ಎರಡು ಸಾಧನಗಳನ್ನೇ ಕಠೋಪನಿಷತ್ತಿನಲ್ಲಿ **ಶ್ರೇಯ** (ಕಲ್ಯಾಣ ಪ್ರಾಪ್ತಿಯ ಮಾರ್ಗ) ಹಾಗೂ **ಪ್ರೇಯ** (ಪ್ರಿಯವಾಗಿ ತೋರುವ ಮಾರ್ಗ) — ಈ ಎರಡೂ ಸಾಧನಗಳು ಮನುಷ್ಯನಿಗೆ ದೊರೆಯುತ್ತವೆ. **(ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ)** ಬುದ್ಧಿವಂತ ಮಾನವನು ಈ ಎರಡನ್ನು ಚೆನ್ನಾಗಿ ವಿಚಾರ ಮಾಡಿ ಯಥಾವತ್ತಾಗಿ ಅರಿತುಕೊಳ್ಳುತ್ತಾನೆ. **(ತೌ ಸಂ ಪರೀತ್ಯ ವಿವಿನಕ್ತಿ ಧೀರಃ)** ಅನಂತರ ಪ್ರೇಯ ಅಥವಾ ಅವಿದ್ಯೆ ಅಥವಾ ಕರ್ಮ ಮಾರ್ಗಕ್ಕಿಂತ ಜ್ಞಾನ ಅಥವಾ ಕಲ್ಯಾಣ ಸಾಧನವನ್ನೇ ಶ್ರೇಷ್ಠವೆಂದರಿತು ಅಂಗೀಕರಿಸುತ್ತಾನೆ. **(ಶ್ರೇಯೋ ಹಿ ಧೀರೋಽಭಿ ಪ್ರೇಯಸೋ ವೃಣೀತೇ)** ಆದರೆ, ಮಂದಬುದ್ಧಿಯುಳ್ಳ ಅಜ್ಞಾನಿಯು **ಪ್ರೇಯ** ಅಥವಾ ಅವಿದ್ಯೆ (ಅಜ್ಞಾನ) ಯ ಮಾರ್ಗವನ್ನೇ ಸ್ವೀಕರಿಸುತ್ತಾನೆ. **(ಪ್ರೇಯೋ ಮಂದೋ ಯೋಗಕ್ಷೇಮಾದ್ ವೃಣೀತೇ** ಕಠೋಪನಿಷತ್ ೧.೨.೨)

ಈ ಎರಡೂ ಸಾಧನಗಳ ಪೈಕಿ ಜ್ಞಾನವನ್ನಂಗೀಕರಿಸುವ ಸಾಧಕನು ಪರಮಾತ್ಮನನ್ನು ಪಡೆಯುತ್ತಾನೆ, ಮತ್ತು ಅಜ್ಞಾನ ಅಥವಾ ಕರ್ಮ ಪೂರ್ಣಾನುಯಾಯಿಯು ಈ ಜಗತ್ತಿನಲ್ಲಿಯೇ ಜನ್ಮ ಮೃತ್ಯುಗಳ ಬಂಧನದಲ್ಲಿ ತೊಳಲಾಡುತ್ತಾ ನಾನಾ ಯೋನಿಗಳಲ್ಲಿ ವಿಚರಿಸುತ್ತಾನೆ ಮತ್ತು ಈ ರೀತಿ ಮಾನವ ಜೀವನದ ಲಕ್ಷ್ಯವನ್ನೂ ಸಹ ಪಡೆಯಲಾರದೆ ಹೋಗುತ್ತಾನೆ.

ಇನ್ನು ಈ ಜ್ಞಾನ (ವಿದ್ಯೆ) ಮತ್ತು ಕರ್ಮ (ಅವಿದ್ಯೆ)ಗಳ ನಿಜಸ್ವರೂಪವನ್ನು ತಿಳಿಯುವುದು ಅಗತ್ಯವಿದೆ. ಇವೆರಡನ್ನೂ ಸರಿಯಾಗಿ ತಿಳಿಯದವರು ಎರಡರ ಅನುಷ್ಠಾನವನ್ನೂ ಮಾಡತೊಡಗಿದಲ್ಲಿ ಪರಿಣಾಮವೇನಾದೀತು? ಎಂಬುದನ್ನು ಈ ಕೆಳಗಣ ಮಂತ್ರದಲ್ಲಿ ಸ್ಪಷ್ಟೀಕರಿಸಿರುವರು-

**ಅಂಧಂತಮಃ ಪ್ರವಿಶಂತಿ ಯೇಽವಿದ್ಯಾ ಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ॥**

[ಈಶೋಪನಿಷತ್ ೯, ಯಜುರ್ವೇದ ೪೦.೧೨]

ಅನ್ವಯ ಯೇ ಅವಿದ್ಯಾಂ ಉಪಾಸತೇ, ಅಂಧಂ ತಮಃ ಪ್ರವಿಶಂತಿ । ಯೇ ವಿದ್ಯಾಯಾಂ ರತಾಃ, ತೇ ತತಃ ಭೂಯ ಇವ ತಮಃ ಪ್ರವಿಶಂತಿ ।

ತಾತ್ಪರ್ಯವಿಷ್ಟೇ – ಸಾಂಸಾರಿಕ ಸುಖ ಭೋಗಗಳಲ್ಲಿ ಲಿಪ್ತರಾಗಿದ್ದು ಅವುಗಳನ್ನು

ಪಡೆಯಲು ಸಾಧನವಾದ ಅವಿದ್ಯೆಯನ್ನು ಅಂದರೆ ನಾನಾವಿಧವಾದ ಕರ್ಮಗಳ ಅನುಷ್ಠಾನ ವನ್ನು ಮಾಡಿ ತತ್ಪರಿಣಾಮವಾಗಿ ಅಜ್ಞಾನಾಂಧಕಾರಪೂರ್ಣವಾದ ವಿವಿಧ ಯೋನಿಗಳನ್ನೂ, ಭೋಗಗಳನ್ನೂ ಪಡೆಯುತ್ತಾರೆ. ಮತ್ತು ಮಾನವ ಜೀವನದ ಪರಮ ಲಕ್ಷ್ಯವಾದ ಪರ ಮಾತ್ಮನನ್ನು ಪಡೆಯದೆ ನಿರಂತರ ಜನ್ಮ ಮೃತ್ಯುಗಳೆಂಬ ಆವಾಗಮನ ಬಂಧನದಲ್ಲಿ ಸಿಲುಕಿ ಕೊಂಡಿರುತ್ತಾರೆ ಮತ್ತು ನಾನಾ ವಿಧವಾದ ಸಾಂಸಾರಿಕ ಕಷ್ಟಗಳಿಗೆ ತುತ್ತಾಗಿ ಸದಾಕಾಲವೂ ಸಂತಪ್ತರಾಗುತ್ತಾರೆ.

ಎರಡನೆಯ ವಿಧವಾದ ಮಾನವರು ಬರೇ ಶಾಸ್ತ್ರಾಧ್ಯಯನ ಮಾಡುತ್ತಾ ತದನು ಕೂಲವಾದ ಆಚರಣ (ಕರ್ಮ)ವನ್ನೆಸಗದೆ ಸ್ವತಃ ಪೂರ್ಣಜ್ಞಾನಿಗಳೆಂದು ತಿಳಿದು ಜ್ಞಾನಾಭಿ ಮಾನಿಗಳಾಗುತ್ತಾರೆ. ಇಂತಹ ಪಂಡಿತಂಮನ್ಯರಾದ ಪುರುಷರು ತಮ್ಮನ್ನು ಜ್ಞಾನಿಗಳೆಂದು ತಿಳಿದು 'ನಮಗಾವ ಕರ್ಮವೂ ಕರಣೀಯವಿಲ್ಲವೆಂದು ಸಾರಿ ಕರ್ತವ್ಯ ಕರ್ಮಗಳನ್ನು ತ್ಯಜಿಸಿ ತಮ್ಮನ್ನು ಇಂದ್ರಿಯಗಳ ಅಧೀನವಾಗಿ ಶಾಸ್ತ್ರ ವಿರುದ್ಧವಾದ ಉಚ್ಛೃಂಖಲ ಆಚರಣ ಮಾಡು ತ್ತಾರೆ. ಆದುದರಿಂದ ಇವರೆಲ್ಲಾ ಸಕಾಮಭಾವದಿಂದ ಕರ್ಮ ಮಾಡುವ ವಿಷಯಾಸಕ್ತ ಪುರುಷರಿಗಿಂತಲೂ ಘೋರ ಅಂಧಕಾರವನ್ನು (ಅಂದರೆ, ಪಶುಪಕ್ಷಿ, ಶ್ವಾನಶೂಕರ ಮೊದಲಾದ ಪತಿತ ನಿಮ್ನ ಯೋನಿಗಳನ್ನು) ಪಡೆದು ಭೋಗಗಳನ್ನನುಭವಿಸುತ್ತಾರೆ.

ಈ ಮಂತ್ರದಲ್ಲಿ **ವಿದ್ಯೆ** ಮತ್ತು **ಅವಿದ್ಯೆಯ** ಮಹತ್ತ್ವಪೂರ್ಣ ಸಿದ್ಧಾಂತವನ್ನು ವರ್ಣಿಸಿರುವರು. ಜ್ಞಾನವನ್ನು ವಿದ್ಯೆಯೆನ್ನುತ್ತಾರೆಂಬುದು ವಿವಾದಾಸ್ಪದ ವಿಷಯವಲ್ಲ. ಅವಿದ್ಯೆಗೆ ಮಾತ್ರ ಎರಡು ಅರ್ಥಗಳನ್ನು ಮಾಡುತ್ತಾರೆ. (೧) ಪಾರಿಭಾಷಿಕ ಮತ್ತು (೨) ಯೌಗಿಕ. ಅವಿದ್ಯೆಯ ಪಾರಿಭಾಷಿಕ ಅರ್ಥವನ್ನು ನಾವು ಯೋಗದರ್ಶನದಲ್ಲಿ ಕಾಣ ಬಹುದು.

**ಅನಿತ್ಯಾ ಶುಚಿ ದುಃಖಾನಾತ್ಮ ಸು**
**ನಿತ್ಯ ಶುಚಿ ಸುಖಾತ್ಮ ಖ್ಯಾತಿರವಿದ್ಯಾ॥** [೨. ೫.]

ಅರ್ಥಾತ್, ಅನಿತ್ಯ ವಸ್ತುವನ್ನು ನಿತ್ಯವೆಂದೂ, ಅಪವಿತ್ರವನ್ನು ಪವಿತ್ರವೆಂದೂ, ದುಃಖವನ್ನು ಸುಖವೆಂದೂ, ಅನಾತ್ಮನನ್ನು ಆತ್ಮನೆಂದೂ ಭಾವಿಸುವುದು ಅವಿದ್ಯೆ. ಶರೀರಾದಿ ಪದಾರ್ಥಗಳು ಅನಿತ್ಯವಾಗಿವೆ, ಅವನ್ನು ನಿತ್ಯವೆಂದು ತಿಳಿಯುವುದು ಮಲಮೂತ್ರಾದಿಯುಕ್ತ ವಾದ ಅಥವಾ ಮಿಥ್ಯಾ ಭಾಷಣ, ಕಳ್ಳತನ ಮೊದಲಾದುವುಗಳಿಂದ ಪೂರ್ಣ ಅಪವಿತ್ರ ವಸ್ತು ಗಳನ್ನು ಪವಿತ್ರವೆಂದು ತಿಳಿಯುವುದು, ಸಾಂಸಾರಿಕ ವಿಷಯ ವಾಸನೆಗಳಿಂದ ಪರಿಪೂರ್ಣವಾದ ದುಃಖಗಳಲ್ಲಿ ಸುಖವೆಂಬ ಭಾವನೆ ಹಾಗೂ ಅನಾತ್ಮನಲ್ಲಿ ಆತ್ಮಬುದ್ಧಿಯನ್ನಿಡುವುದೇ **ಅವಿ ದ್ಯೆಯು.** ಇದಕ್ಕೆ ವಿರುದ್ಧ ಅಂದರೆ ಅನಿತ್ಯವನ್ನು ಅನಿತ್ಯವೆಂದೂ, ನಿತ್ಯವನ್ನು ನಿತ್ಯವೆಂದೂ ಅಪವಿತ್ರದಲ್ಲಿ ಅಪವಿತ್ರವೆಂದೂ, ಪವಿತ್ರದಲ್ಲಿ ಪವಿತ್ರವೆಂದೂ, ಸುಖದಲ್ಲಿ ಸುಖವೆಂದೂ, ದುಃಖದಲ್ಲಿ ದುಃಖವೆಂದೂ, ಅನಾತ್ಮನಲ್ಲಿ ಅನಾತ್ಮನೆಂದೂ, ಆತ್ಮನಲ್ಲಿ ಆತ್ಮನೆಂದೂ ತಿಳು ವಳಿಕೆಯಿಡುವುದೇ **ವಿದ್ಯೆಯು.** ಮಹರ್ಷಿ ದಯಾನಂದರು ಸತ್ಯಾರ್ಥ ಪ್ರಕಾಶದ ನವಮ ಸಮುಲ್ಲಾಸದಲ್ಲಿ ಅವಿದ್ಯಾ-ವಿದ್ಯೆಗಳ ಪರಿಭಾಷೆಯನ್ನು ಮಾಡುತ್ತಾ ಹೇಳಿದ್ದಾರೆ:—

**ವೇತ್ತಿ ಯಥಾವತ್ತತ್ತ್ವಂ ಪದಾರ್ಥ ಸ್ವರೂಪಂ ಯ ಯಾ ಸಾ ವಿದ್ಯಾ, ಯ ಯಾ ತತ್ ಸ್ವರೂಪಂ ನ ಜಾನಾತಿ ಭ್ರಮಾದನ್ಯಸ್ಮಿನ್ನನ್ಯನ್ನಿಶ್ಚಿನೋತಿ ಸಾಽವಿದ್ಯಾ।**

ಅಂದರೆ, ಪದಾರ್ಥಗಳ ಸ್ವರೂಪವನ್ನು ತಿಳಿಸುವುದು ವಿದ್ಯೆ ಮತ್ತು ತತ್ತ್ವಸ್ವರೂಪವನ್ನರಿಯದಿರುವುದು, ಒಂದರಲ್ಲಿ ಇನ್ನೊಂದೆಂಬ ತಿಳುವಳಿಕೆ ಅವಿದ್ಯೆಯು.

ಆದರೆ, ಅವಿದ್ಯೆಯ ಎರಡನೇ ಅರ್ಥವು ಯೌಗಿಕವಾಗಿದೆ ಅಂದರೆ ವಿದ್ಯೆಗಿಂತ ಬೇರಾದುದು, ಜ್ಞಾನವಲ್ಲದುದು, ಜ್ಞಾನವಲ್ಲದ ವಸ್ತುವಾವುದು? ಈ ಪ್ರಶ್ನೆಗೆ ಉತ್ತರವು ಆ ಮಂತ್ರದಲ್ಲಿಯೇ ದೊರೆಯುತ್ತದೆ. ಯಜುರ್ವೇದದ ೪೦.೧೧ನೇ ಮಂತ್ರದ ದೇವತೆ ಆತ್ಮನು. ಆತ್ಮನ ಸ್ವಾಭಾವಿಕ ಗುಣಗಳಾಗಿ ಜ್ಞಾನ ಕರ್ಮಗಳನ್ನು ಸ್ವೀಕರಿಸಿರುವರು. ಶರೀರ ನಿರ್ಮಾಣವೂ ಸಹ ಆತ್ಮನ ಗುಣಗಳಿಗೇ ಸಾಕ್ಷಿಯಾಗಿದೆ. ಶರೀರದಲ್ಲಿ ಜ್ಞಾನ-ಕರ್ಮ ಎಂಬ ಎರಡೇ ವಿಧವಾದ ಇಂದ್ರಿಯಗಳಿವೆ. ಇವುಗಳ ಪೈಕಿ ಜ್ಞಾನೇಂದ್ರಿಯಗಳು ಆತ್ಮನ ಸ್ವಾಭಾವಿಕ ಗುಣವಾದ ಜ್ಞಾನವನ್ನೂ, ಕರ್ಮೇಂದ್ರಿಯಗಳು ಆತ್ಮನ ಕರ್ಮ ಗುಣವನ್ನೂ ಸಾರ್ಥಕಗೊಳಿಸುತ್ತವೆ. ಈ ಜ್ಞಾನ ಕರ್ಮಗಳ ಹೊರತು ಆತ್ಮನ ಸ್ವಾಭಾವಿಕ ಗುಣವು ಬೇರಾವುದಾದರೂ ಇದ್ದ ಪಕ್ಷದಲ್ಲಿ ಶರೀರದಲ್ಲಿ ಮೂರನೇ ವಿಧವಾದ ಇಂದ್ರಿಯ ಸಮುದಾಯವೂ ಅವನ ಗುಣವನ್ನು ಸಾರ್ಥಕಗೊಳಿಸಲಿಕ್ಕಾಗಿ ಇರುತ್ತಿತ್ತು. ಹಾಗಿಲ್ಲವಾದುದರಿಂದ ಆತ್ಮನ ಸ್ವಾಭಾವಿಕ ಗುಣಗಳು ಎರಡೇ ಎಂಬುದು ಸಿದ್ಧವಾಗುತ್ತದೆ. ವಿದ್ಯೆಯನ್ನು ಜ್ಞಾನವೆಂದು ಹೇಳಿದ್ದು ಜ್ಞಾನ ಭಿನ್ನವಾದುದನ್ನು ಅವಿದ್ಯೆಯೆಂದು ಹೇಳಿದುದರಿಂದ ಜ್ಞಾನ ಭಿನ್ನವಾದುದು ಕರ್ಮವೇ ಆಗಿರುವುದೆಂಬುದು ಸುಸ್ಪಷ್ಟವಾಗುತ್ತದೆ.

ಆದುದರಿಂದ ಮಾನವನು ಮೊದಲು ಜ್ಞಾನದ ಉಪಲಬ್ಧಿಯನ್ನು ಮಾಡಿಕೊಳ್ಳಬೇಕು. ಅನಂತರ ಜ್ಞಾನಪೂರ್ವಕ ಕರ್ಮಮಾಡಬೇಕು. ಇದು ಮಾನವ ಮಾತ್ರರ ಕರ್ತವ್ಯವಾಗಿದೆ. ಜ್ಞಾನಪೂರ್ವಕ ಕರ್ಮ ಮಾಡುವುದರಿಂದ ಮಾನವನೆಂದಿಗೂ ಮಾರ್ಗಭ್ರಷ್ಟನಾಗಲಾರನು. ತಾತ್ಪರ್ಯವಿಷ್ಟೇ, ವೇದಾದಿ ಶಾಸ್ತ್ರಗಳನ್ನು ಓದುವುದು ಮಾತ್ರವೇ ಜ್ಞಾನವಲ್ಲ. ಓದಿ, ಮನನ ಮಾಡಿ ತದನುಸಾರ ಆಚರಣ ಮಾಡುವುದರಿಂದಲೇ ಮಾನವನು ಜೀವನದ ಲಕ್ಷ್ಯಪ್ರಾಪ್ತಿಯ ಅಧಿಕಾರಿಯಾಗುತ್ತಾನೆ.

ಬರಿಯ ಅಧ್ಯಯನ ಮಾತ್ರದಿಂದಲೇ ತಮ್ಮನ್ನು ಪಂಡಿತನೆಂದು ತಿಳಿದುಕೊಳ್ಳುವ ಹಾಗೂ ತದನುಸಾರ ಕರ್ಮವನ್ನೆಸಗದ ಮಾನವರು, ಸಾಂಸಾರಿಕ ಕರ್ಮ ಲಿಪ್ತರಾಗಿ ಕ್ಷಣಿಕ ಫಲಪ್ರಾಪ್ತಿಯನ್ನೇ ಸುಖದ ಅನುಭೂತಿಯೆಂದು ತಿಳಿದು ಸ್ವಜೀವನವನ್ನು ಸಫಲವೆಂದು ಸಾರುವವರಿಗಿಂತ ಹೆಚ್ಚಾದ ಅಜ್ಞಾನಾಂಧಕಾರದ ಗರ್ವದಲ್ಲಿರುತ್ತಾರೆ.

ಜ್ಞಾನ ಮತ್ತು ಕರ್ಮ—ಇವೆರಡರ ಫಲವೂ ಬೇರೆ ಬೇರೆಯಾಗಿದೆಯೆಂಬುದು ಮೇಲಿನ ವಿವೇಚನೆಯಿಂದ ಸ್ಪಷ್ಟವಾಗುತ್ತದೆ. ಆದರೆ, ಎರಡರ ಸಾಮಂಜಸ್ಯವನ್ನು ಮಾಡಿದ ಪಕ್ಷದಲ್ಲಿ ಎರಡರ ಪರಿಣಾಮವೂ ತದ್ವಿಪರೀತವಾಗುವುದು. ಅಂದರೆ, ಜ್ಞಾನಪೂರ್ವಕ ಕರ್ಮವನ್ನೆಸಗುವುದರಿಂದ ಮಾನವನು ತನ್ನ ಲಕ್ಷ್ಯ ಪ್ರಾಪ್ತಿಯಲ್ಲಿ ನಿಜವಾಗಿಯೂ ಸಫಲನಾಗುವನೆಂಬುದೇ ಈ ಮಂತ್ರದ ಗೂಢವಾದ ಅಭಿಪ್ರಾಯವು.

---

# ಅವರೆಲ್ಲ ನಮ್ಮವರು, ನಮ್ಮವರಾಗಿಯೇ ಉಳಿಯುವರು

● ಶ್ರೀ ಓಂಪ್ರಕಾಶ ಆರ್ಯ, ಜಲಂಧರ.

**ಅಜ್ಯೇಷ್ಠಾಸೋ ಅಕನಿಷ್ಠಾಸ ಏತೇ ಸಂಭ್ರಾತರೋ**
**ವಾವೃಧುಃ ಸೌಭಗಾಯ** [ಋಗ್ವೇದ: ೫-೬-೫]

ಮಾನವರ ಪೈಕಿ ಜನ್ಮನಾ ಯಾರೂ ದೊಡ್ಡವರಲ್ಲ, ಯಾರೂ ಚಿಕ್ಕವರಲ್ಲ. ಎಲ್ಲರೂ ಸಮಾನ ಸಹೋದರರಾಗಿರುವರು. ಎಲ್ಲರೂ ಸೇರಿ ಇಹ ಪರಲೋಕಗಳ ಅಂದರೆ ಶರೀರ ಆತ್ಮ ಸಂಬದ್ಧವಾದ ಐಶ್ವರ್ಯ ಪ್ರಾಪ್ತಿಗಾಗಿ ಪ್ರಯತ್ನಿಸಬೇಕು. ವೇದದ ಈ ಸಾರ್ವಭೌಮ ಶಿಕ್ಷಣಕ್ಕನುಸಾರ ತಮ್ಮ ತಮ್ಮ ಗುಣಕರ್ಮ ಸ್ವಭಾವಗಳಿಗೆ ಅನುಸಾರವಾಗಿ ಮಾನವರೆಲ್ಲರೂ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಮುಂದುವರಿಯುವ ಸಮಾನ ಅವಸರವನ್ನು ಹೊಂದಿರುವರು.

ಜಾತಿ ಮತ್ತು ವರ್ಣಕ್ಕೆ ಒಂದೇ ಅರ್ಥವನ್ನು ಕಲ್ಪಿಸಿ ಮಾನವನನ್ನು ತಿರಸ್ಕರಿಸುವ, ದ್ವೇಷವನ್ನು ಹರಡುವ ಹಾಗೂ ಭೇದಭಾವವನ್ನುಂಟುಮಾಡುವವರನ್ನು ಆಹ್ವಾನಿಸುತ್ತಾ ಮಹರ್ಷಿ ದಯಾನಂದರು 'ಜನ್ಮದಿಂದ ಮರಣದ ತನಕ ಒಂದೇ ಆಗಿರುವುದು ಜಾತಿ, ಉದಾ—ಮನುಷ್ಯ, ದನ, ಕುದುರೆ ಮೊದಲಾದುವು. ಆದರೆ, ವರ್ಣವು ಪರಿವರ್ತನಶೀಲವಾಗಿದೆ'ಯೆಂದು ಹೇಳಿರುವರು.

**ವರ್ಣೋ ವೃಣೋತೇ:** ಅಂದರೆ, ನಾವು ಆರಿಸುವಂತಹದು ವರ್ಣವು. ಮಾನವನು ತನ್ನ ಜೀವನ ನಡೆಸಲು ಯಾವ ವ್ಯವಹಾರ ಸಿದ್ಧಿಯ ಯೋಗ್ಯತೆಯುಳ್ಳವನಾಗಿರುವನೋ ಅದರಂತೆಯೇ ಅವನಿಗೆ ವರ್ಣ ಲಭಿಸುತ್ತದೆ. ಅದು ಶ್ರಮಸಾಧ್ಯವಾಗಿರುವುದರಿಂದ ಅದರಲ್ಲಿ ಪರಿವರ್ತನವೂ ಸ್ವಾಭಾವಿಕವಾಗಿದೆ.

ಒಬ್ಬ ಬೇಸಾಯಗಾರನ ಮಗ ವೈದ್ಯ, ಶಿಕ್ಷಕ, ಸೈನಿಕ, ವಿಜ್ಞಾನಿ ಹಾಗೂ ಶ್ರಮಿಕ-ಏನೂ ಆಗಬಲ್ಲನು. ವರ್ಣವು ವ್ಯವಸಾಯ ಮೂಲಕವಾಗಿರುವುದರಿಂದಲೇ ವ್ಯವಸಾಯವನ್ನು ಬದಲಾಯಿಸಿದಾಗ ವರ್ಣವು ಬದಲಾಯಿಸುವುದು. ಆದುದರಿಂದಲೇ ಮನುವು—ಶೂದ್ರ ಕುಲದಲ್ಲಿ ಹುಟ್ಟಿ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಂತಹ ಗುಣಕರ್ಮ ಸ್ವಭಾವಗಳನ್ನು ಹೊಂದಿರುವವನು ಆಯಾ ವರ್ಣವನ್ನು ಪಡೆಯುವನು. ಅಂತೆಯೇ ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಕುಲದಲ್ಲಿ ಹುಟ್ಟಿರುವವರು ಶೂದ್ರರಂತ ಗುಣಕರ್ಮ ಸ್ವಭಾವಗಳನ್ನು ಹೊಂದಿರುವರಾದರೆ ಶೂದ್ರರೇ ಆಗುವರೆಂದು ಹೇಳಿರುವನು. ನಾಲ್ಕು ವರ್ಣಗಳ ಪೈಕಿ ಯಾವ ವರ್ಣಕ್ಕೆ ಅನುಕೂಲವಾದ ಗುಣಕರ್ಮಗಳನ್ನು ಹೊಂದಿಕೊಂಡಿರುವರೋ ಆಯಾ ವರ್ಣಗಳನ್ನು ಸೇರುತ್ತಾರೆ.

ಬ್ರಾಹ್ಮಣನ ಬಾಲಕನು ಕ್ಷತ್ರಿಯ, ವೈಶ್ಯ, ಶೂದ್ರನಾಗಲೀ ಶೂದ್ರನ ಬಾಲಕನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯನಾಗಲೀ ಆಗಲು ಪತನಪಾತನದ ಸಮಾನ ವ್ಯವಸ್ಥೆಯಿರುವುದು ಪರಮಾವಶ್ಯಕ. ಮನುವಿನ ಸಮಯದಲ್ಲಿ ನಾಲ್ಕೂ ವರ್ಣಗಳ ಬಾಲಕರ ಶಿಕ್ಷಣ ಪಡೆಯಲು ಪೂರ್ಣ ಸ್ವತಂತ್ರರಾಗಿದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಮಹರ್ಷಿ ದಯಾನಂದರೂ ಋಗ್ವೇದಾದಿ ಭಾಷ್ಯ ಭೂಮಿಕೆಯಲ್ಲಿ "ಶೂದ್ರನಿಗೆ ವೇದಾದಿಗಳನ್ನೋದುವ ಅಧಿಕಾರವಿಲ್ಲದಿರುತ್ತಿದ್ದಲ್ಲಿ ಆತ ಬ್ರಾಹ್ಮಣ, ಕ್ಷತ್ರಿಯ,

ವೈಶ್ಯರ ಅಧಿಕಾರವನ್ನು ಹೇಗೆ ತಾನೇ ಪಡೆಯಬಲ್ಲನು? ಇಪ್ಪತ್ತೈದು ವರ್ಷಗಳಾದ ಮೇಲೆಯೇ ವರ್ಣ ನಿರ್ಣಯವಾಗುತ್ತದೆಂದು ಸ್ಪಷ್ಟವಾಗುತ್ತದೆ. ಬುದ್ಧಿಯು ಇಪ್ಪತ್ತೈದು ವರ್ಷಗಳ ತನಕ ಬೆಳೆಯುತ್ತಿದ್ದು ಆಮೇಲೆಯೇ ವರ್ಣ ನಿರ್ಣಯವಾಗುತ್ತದೆ.

ಕೆಲವು ರೂಢಿವಾದಿಗಳು ರಜೋವೀರ್ಯಗಳೇ ವರ್ಣಗಳಿಗೆ ಆಧಾರವೆಂದು ಹೇಳುತ್ತಾರೆ. ಅಂತಹರಿಗೆ ತಿಳಿಯಪಡಿಸುತ್ತಾ ಸ್ವಾಮೀಜೀ ಸತ್ಯಾರ್ಥ ಪ್ರಕಾಶದಲ್ಲಿ ಬರೆಯುತ್ತಾರೆ—"ಯಾವನಾದರೂ ರಜೋವೀರ್ಯಯೋಗದಿಂದಲೇ ವರ್ಣಾಶ್ರಮ ವ್ಯವಸ್ಥೆಯನ್ನು ಒಪ್ಪುವುದಾದರೆ ಮತ್ತು ಗುಣ-ಕರ್ಮಗಳ ಯೋಗದಿಂದ ಒಪ್ಪುವುದಿಲ್ಲವಾದರೆ ಅವನನ್ನು 'ಯಾವನಾದರೂ ತನ್ನ ವರ್ಣವನ್ನು ಬಿಟ್ಟು ನೀಚನೋ, ಅಂತ್ಯಜನೋ, ಅಥವಾ ಕ್ರೈಸ್ತನೋ, ಮುಸಲ್ಮಾನನೋ ಆಗಿಹೋಗಿದ್ದರೆ ಅವನನ್ನು ಬ್ರಾಹ್ಮಣನೆಂದು ಏಕೆ ಒಪ್ಪಿಕೊಳ್ಳುವುದಿಲ್ಲ' ಎಂದು ಕೇಳಬೇಕು. ಈ ಸ್ಥಿತಿಯಲ್ಲಿ 'ಅವನು ಬ್ರಾಹ್ಮಣನ ಕರ್ಮಗಳನ್ನು ಬಿಟ್ಟುಬಿಟ್ಟನು. ಆದುದರಿಂದ ಅವನು ಬ್ರಾಹ್ಮಣನಲ್ಲ' ಎಂದೇ ಹೇಳುವಿರಿ. ಇದರಿಂದ, ಯಾವ ಬ್ರಾಹ್ಮಣ-ಮೊದಲಾದವರು ಉತ್ತಮ ಕರ್ಮ ಮಾಡುತ್ತಾರೋ, ಅವರೇ ಬ್ರಾಹ್ಮಣ ಮೊದಲಾದವರು. ಮತ್ತು ಯಾವನು ನೀಚನಾದರೂ ಉತ್ತಮ ವರ್ಣದ ಗುಣ-ಕರ್ಮ-ಸ್ವಭಾವಗಳಿಂದ ಯುಕ್ತನಾಗಿದ್ದರೆ, ಅವನನ್ನು ಉತ್ತಮ ವರ್ಣದಲ್ಲಿಯೂ, ಮತ್ತು ಯಾವನು ಉತ್ತಮ ವರ್ಣಸ್ಥನಾಗಿ ನೀಚಕರ್ಮ ಮಾಡುತ್ತಾನೋ, ಅವನನ್ನು ನೀಚವರ್ಣದಲ್ಲಿಯೂ ಅವಶ್ಯವಾಗಿ ಎಣಿಸಬೇಕು". (ಸಮು. ೮. ಪುಟ ೧೧೫) ಸತ್ಯಾರ್ಥ ಪ್ರಕಾಶದ ತೃತೀಯ ಸಮುಲ್ಲಾಸದಲ್ಲಿ ಈ ವಿಷಯವನ್ನು ಕುರಿತು ಪ್ರಶ್ನೋತ್ತರ ರೂಪವಾಗಿ ಬೆಳಕು ಬೀರುತ್ತಾ ಮಹರ್ಷಿಯವರು ಬರೆಯುತ್ತಾರೆ.

ಪ್ರಶ್ನೆ—ಶೂದ್ರರೂ ಮತ್ತು ಸ್ತ್ರೀಯರೂ ಕೂಡ ವೇದಗಳನ್ನೋದಬೇಕೇನು? ಇವರು ಓದುವರಾದರೆ, ಮತ್ತೆ ನಾವೇನು ಮಾಡಬೇಕು? ಮತ್ತು ಇವರಿಗೆ ಓದಿಸಬೇಕು—ಎನ್ನಲು ಪ್ರಮಾಣವೂ ಇಲ್ಲ. ಆದರೆ, ಕೆಳಕಂಡ ಹಾಗೆ ನಿಷೇಧವೂ ಇದೆ.

**ಸ್ತ್ರೀ ಶೂದ್ರೌ ನಾಧೀಯಾತಾಮಿತಿ ಶ್ರುತೇಃ ||**

ಸ್ತ್ರೀಯರು ಮತ್ತು ಶೂದ್ರರು ಓದಬಾರದು. ಹೀಗೆ ಶ್ರುತಿಯಿದೆ.

ಉತ್ತರ—ಸಮಸ್ತ ಸ್ತ್ರೀಯರಿಗೂ ಮತ್ತು ಪುರುಷರಿಗೂ ಎಂದರೆ ಮನುಷ್ಯ ಮಾತ್ರರಿಗೆ ಓದುವ ಅಧಿಕಾರವಿದೆ. ಮತ್ತು ನಿಮ್ಮ ಈ ಶ್ರುತಿ ನಿಮ್ಮ ಕಪೋಲಕಲ್ಪನೆಯಿಂದ ಉದ್ಭವಿಸಿದೆ. ಇದು ಯಾವ ಪ್ರಮಾಣಿಕ ಗ್ರಂಥದ್ದೂ ಅಲ್ಲ. ಮತ್ತು ಸಮಸ್ತ ಮಾನವರಿಗೂ ವೇದಾದಿಶಾಸ್ತ್ರಗಳನ್ನು ಓದುವ-ಕೇಳುವ ಅಧಿಕಾರದ ಪ್ರಮಾಣ ಯಜುರ್ವೇದದ ೨೬ನೆಯ ಅಧ್ಯಾಯದಲ್ಲಿ ಎರಡನೆಯ ಮಂತ್ರವಾಗಿದೆ—

**ಯಥೇಮಾಂ ವಾಚಂ ಕಲ್ಯಾಣೀ ಮಾವದಾನಿ ಜನೇಭ್ಯಃ |**
**ಬ್ರಹ್ಮ ರಾಜನ್ಯಾಭ್ಯಾಂ ಶೂದ್ರಾಯ ಚಾರ್ಯಾಯ ಚ**
**ಸ್ವಾಯ ಚಾರಣಾಯ ||**

ಪರಮೇಶ್ವರನು ಹೇಳುತ್ತಾನೆ. "(ಯಥಾ) ಹೇಗೆ ನಾನು (ಜನೇಭ್ಯಃ) ಎಲ್ಲ ಮಾನವರಿಗಾಗಿ (ಇಮಾಂ) ಈ (ಕಲ್ಯಾಣೀಂ) ಕಲ್ಯಾಣ ಅಂದರೆ ಜಗತ್ತಿನ ಹಾಗೂ ಮುಕ್ತಿಯ ಸುಖವನ್ನು ಕೊಡುವ (ವಾಚಂ) ಋಗ್ವೇದ ಮೊದಲಾದ ನಾಲ್ಕೂ ವೇದಗಳ ವಾಣಿಯ (ಆವದಾನಿ) ಉಪದೇಶ ಮಾಡುತ್ತೇನೋ ಹಾಗೆಯೇ ನೀವೂ ಮಾಡುತ್ತಾ ಹೋಗಿರಿ".

ಈ ಸ್ಥಳದಲ್ಲಿ ಯಾವನಾದರೂ ಜನ–ಎಂಬ ಶಬ್ದದಿಂದ ದ್ವಿಜರನ್ನು ಗ್ರಹಿಸಬೇಕು ಏಕೆಂದರೆ, ಸ್ಮೃತಿ ಮೊದಲಾದ ಗ್ರಂಥಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ ವೈಶ್ಯರಿಗೆ ಮಾತ್ರ ವೇದಗಳನ್ನು ಓದುವ ಅಧಿಕಾರವನ್ನು ಹೇಳಿದೆ. ಸ್ತ್ರೀಯರಿಗೆ ಮತ್ತು ಶೂದ್ರ ಮೊದಲಾದ ವರ್ಣಗಳಿಗೆ ಹೇಳಿಲ್ಲ–ಎಂದು ಪ್ರಶ್ನೆ ಹಾಕಿದರೆ—

ಉತ್ತರ–(ಬ್ರಹ್ಮ ರಾಜನ್ಯಾಭ್ಯಾಂ) ಮೊದಲಾದುವನ್ನು ನೋಡಿರಿ. ಪರಮೇಶ್ವರನು ಸ್ವತಃ "ನಾವು ಬ್ರಾಹ್ಮಣ, ಕ್ಷತ್ರಿಯ (ಅರ್ಯಾಯ) ವೈಶ್ಯ, (ಶೂದ್ರಾಯ) ಶೂದ್ರ ಮತ್ತು (ಸ್ವಾಯ) ಭೃತ್ಯರು ಅಥವಾ ಸ್ತ್ರೀ ಮೊದಲಾದವರು (ಅರಣಾಯ) ಮತ್ತು ಅತಿ ಶೂದ್ರರು–ಮೊದಲಾದವರಿಗಾಗಿಯೂ ವೇದಗಳ ಪ್ರಕಾಶವನ್ನು ಮಾಡಿದ್ದೇವೆ" ಎಂದು ಹೇಳುತ್ತಾನೆ. ಎಂದರೆ, ಸರ್ವ ಮಾನವರೂ ವೇದಗಳನ್ನು ಓದಿ, ಓದಿಸಿ, ಕೇಳಿ, ಕೇಳಿಸಿ, ವಿಜ್ಞಾನವನ್ನು ಹೆಚ್ಚಿಸಿ, ಒಳ್ಳೆಯ ಮಾತುಗಳ ಸ್ವೀಕಾರ ಮತ್ತು ಕೆಟ್ಟ ಮಾತುಗಳ ತ್ಯಾಗವನ್ನು ಮಾಡಿ, ದುಃಖಗಳಿಂದ ಬಿಡುಗಡೆಹೊಂದಿ ಆನಂದವನ್ನು ಪಡೆದುಕೊಳ್ಳಬೇಕು. ಹೇಳಿರಿ, ಈಗ ನಿಮ್ಮ ಮಾತನ್ನು ಒಪ್ಪಿಕೊಳ್ಳಬೇಕೋ ಅಥವಾ ಪರಮೇಶ್ವರನದನ್ನೋ?

ಪರಮೇಶ್ವರನು ಶೂದ್ರರಿಗೆ ಒಳಿತನ್ನು ಮಾಡಲು ಬಯಸುವುದಿಲ್ಲವೇನು? ವೇದಗಳನ್ನು ಓದಲೂ, ಆಲಿಸಲೂ ಶೂದ್ರರಿಗೆ ನಿಷೇಧವನ್ನು ದ್ವಿಜರಿಗೆ ವಿಧಿಯನ್ನು ರೂಪಿಸಲ ಈಶ್ವರನು ಪಕ್ಷಪಾತಿಯೆ? ಶೂದ್ರರೇ ಮೊದಲಾದವರು ಓದಬಾರದು–ಕೇಳಬಾರದು–ಎಂಬುದೇ ಪರಮೇಶ್ವರನ ಅಭಿಪ್ರಾಯವಾಗಿದ್ದರೆ, ಇವರ ಶರೀರಗಳಲ್ಲಿ ವಾಗಿಂದ್ರಿಯ ಮತ್ತು ಶ್ರೋತೇಂದ್ರಿಯಗಳನ್ನು ಏತಕ್ಕೆ ರಚಿಸುತ್ತಿದ್ದನು? ಹೇಗೆ ಪರಮಾತ್ಮನು ಪೃಥಿವೀ, ಜಲ, ಅಗ್ನಿ, ವಾಯು, ಚಂದ್ರ, ಸೂರ್ಯ ಮತ್ತು ಅನ್ನ–ಮೊದಲಾದ ಪದಾರ್ಥಗಳನ್ನು ಎಲ್ಲರ ಸಲುವಾಗಿ ಮಾಡಿದ್ದಾನೋ, ಹಾಗೆಯೇ ವೇದಗಳನ್ನು ಕೂಡ ಎಲ್ಲರ ಸಲುವಾಗಿ ಪ್ರಕಾಶಿಸಿದ್ದಾನೆ. ಮಹರ್ಷಿಯವರು ಋಗ್ವೇದಾದಿ ಭಾಷ್ಯ ಭೂಮಿಕೆಯ ಅಧಿಕಾರಾನಧಿಕಾರ ವಿಷಯವನ್ನು ಕುರಿತು ಬರೆಯುತ್ತಲೂ ಈ ರೀತಿ ಸ್ಪಷ್ಟ ಪಡಿಸಿರುವರು.

ಉತ್ತರ—ಎಲ್ಲರಿಗೂ ಇದೆ. ಏಕೆಂದರೆ, ಈಶ್ವರನ ಸೃಷ್ಟಿಯಲ್ಲಿ ಯಾರಿಗೂ ಅನಧಿಕಾರವಿರಲಾರದು ನೋಡಿರಿ. ಏನೆಲ್ಲ ಪದಾರ್ಥಗಳು ಈಶ್ವರನಿಂದ ಪ್ರಕಾಶಿತವಾಗಿವೆಯೋ ಅವೆಲ್ಲ ಎಲ್ಲರ ಉಪಕಾರಕ್ಕಾಗಿವೆ. ವೇದವು ಈಶ್ವರನಿಂದ ಪ್ರಕಾಶಿತವಾಗಿವೆ. ವಿದ್ಯೆಯ ಪುಸ್ತಕಗಳು ಎಲ್ಲರ ಹಿತಕ್ಕಾಗಿದ್ದು ಈಶ್ವರರಚಿತ ಪದಾರ್ಥಗಳ ಮೇಲೆ ಎಲ್ಲಾ ಮನುಷ್ಯರಿಗೂ ಅಧಿಕಾರವಿದೆ. ಆದುದರಿಂದ ವೇದವನ್ನು ಎಲ್ಲಾ ಮನುಷ್ಯರೂ ಅರಿಯಬೇಕು. ಏಕೆಂದರೆ, ಆ ಆಸ್ತಿ ಎಲ್ಲರ ತಂದೆಯದಾಗಿದ್ದು ಎಲ್ಲಾ ಪುತ್ರರಿಗೆ ಸೇರಿದೆಯೇ ಹೊರತೇ ಯಾವುದಾದರೂ ಒಂದು ವರ್ಗಕ್ಕೆ ಸೇರಿದ್ದಲ್ಲ.

ಆರ್ಯ ಸಮಾಜದ ವಿಖ್ಯಾತ ಸನ್ಯಾಸಿ ಮಹಾತ್ಮಾ ನಾರಾಯಣ ಸ್ವಾಮೀಜೀಯವರ ಸಮ್ಮತಿ ಹೀಗಿದೆ—

ಜಗತ್ತಿನಲ್ಲಿ ಹಣ ಗಳಿಸಲೂ, ಜೀವನೋಪಾಯಗಳನ್ನು ಪಡೆಯಲೂ ನಾಲ್ಕು ವರ್ಣಗಳ ನಿರ್ಮಾಣವಾಗಿತ್ತು. ಇವೆಲ್ಲ ಹಣದ ಆವಶ್ಯಕತೆಯನ್ನು ಪೂರ್ಣಗೊಳಿಸಲು ಹಣಗಳಿಸುವ ವ್ಯವಸಾಯಗಳಷ್ಟೇ ಆಗಿವೆ. ವಿದ್ಯೆಗೆ ಸಂಬಂಧಪಟ್ಟ ವ್ಯವಸಾಯಗಳು ಅಂದರೆ, ವೈದ್ಯಕ, ಇಂಜಿನಿಯರಿಂಗ್, ವಕಾಲತು, ಶಿಕ್ಷಣ, ಉಪದೇಶಕಾರ್ಯ, ವಿಜ್ಞಾನ ಶೋಧನೆ,–ಇವೆಲ್ಲವೂ ಬ್ರಾಹ್ಮಣ ಕರ್ಮಗಳ ಅಂತರ್ಗತವಾಗಿವೆ. ರಾಜ್ಯದ ಸುರಕ್ಷಾ ಸಂಬದ್ಧವಾದ ಕಾರ್ಯಗಳು ಅಂದರೆ, ಪ್ರಶಾಸನ ವಿಭಾಗಕ್ಕೆ ಸಂಬಂಧಪಟ್ಟದ್ದಾ (ಸಿವಿಲ್) ಗಲೀ, ಸೇನಾ ಸಂಬದ್ಧವಾಗಿರಲಿ–ಎಲ್ಲವೂ ಕ್ಷತ್ರಿಯ ವರ್ಣಕ್ಕೆ ಸೇರಿವೆ. ವ್ಯಾಪಾರ, ಕಲಾಕೌಶಲ, ಕೃಷಿ ಸಂಬದ್ಧವಾದ ಕೆಲಸಗಳು–ಇವೆಲ್ಲವೂ ವೈಶ್ಯ ವರ್ಣಕ್ಕೆ ಸೇರಿವೆ. ಬುದ್ಧಿಯನ್ನು ಕಡಿಮೆ ಉಪಯೋಗಿಸಿ ಬರಿಯ ಶಾರೀರಿಕ ಶ್ರಮವೇ ಹೆಚ್ಚಾಗಿ ಉಳ್ಳ ಕಾರ್ಯಗಳೆಲ್ಲ ಶೂದ್ರ ವರ್ಣಕ್ಕೆ ಸೇರಿವೆ. ನಿಜವಾಗಿ ವರ್ಣವು ವಿಭಾಗ ಅಥವಾ ಡಿಪಾರ್ಟ್‌ಮೆಂಟಿನ ಹೆಸರೆಂದು ತಿಳಿಯಬೇಕು. ಯಾವ ವಿಭಾಗದಲ್ಲಿ ಮಾನವನು ಕಾರ್ಯ ಮಾಡುತ್ತಾನೋ ಆ ವಿಭಾಗದಲ್ಲಿ ಅವನನ್ನು ಸೇರಿಸಲಾಗುತ್ತದೆ.

ಈ ವರ್ಣಗಳಲ್ಲಿ ಪ್ರತಿಯೊಬ್ಬನೂ ತನ್ನ ವ್ಯವಸಾಯದಲ್ಲಿ ವಿಶೇಷಜ್ಞನಾಗಿದ್ದು ಮೇಲು ಕೀಳೆಂಬ ಭೇದವೇ ತಲೆಯೆತ್ತುವುದಿಲ್ಲವೆಂಬುದನ್ನು ನಾವು ಮರೆತುಬಿಟ್ಟದ್ದೇವೆ. ಭೇದವು ಎರಡು ವಿಧವಾಗಿದೆ. ಮೊದಲನೆಯದು ಶ್ರೇಣಿ (Kind) ದ್ದು, ಎರಡನೆಯದು ದರ್ಜೆ (Degree)ದ್ದು. ಶ್ರೇಣಿ ಭೇದವಿರುವ ವಸ್ತುಗಳಲ್ಲಿ ದರ್ಜೆಯ ಭೇದವಿರುವುದಿಲ್ಲ. ಉದಾ–ನಾವು ಈ ಕುದುರೆ ಈ ಮೇಜಿಗಿಂತ ಉತ್ತಮ ಅಥವಾ ಈ ಮೇಜು ಈ ಕುದುರೆಗಿಂತ ಶ್ರೇಷ್ಠವೆಂದು ಹೇಳಲಾರೆವು. ಆದರೆ, ಹತ್ತು ಕುದುರೆಗಳ ಪೈಕಿ ಈ ಕುದುರೆ ಶ್ರೇಷ್ಠವೆಂದು ಹೇಳಬಲ್ಲೆವು. ಅಂತೆಯೇ ಈ ಮೇಜು ಉಳಿದ ಹತ್ತು ಮೇಜುಗಳಿಗಿಂತ ಉತ್ತಮವೆಂದು ಸಾರಬಲ್ಲೆವು. ಇದೇ ರೀತಿ, ವರ್ಣಗಳು ಬೇರೆ ಬೇರೆ ಶ್ರೇಣಿಗಳಿಗೆ ಸಂಬಂಧಪಟ್ಟಿರುವುದರಿಂದ ದರ್ಜೆಯ ಭೇದವನ್ನು ಕಲ್ಪಿಸಲಾರೆವು. ಬ್ರಾಹ್ಮಣನು ಕ್ಷತ್ರಿಯನಿಗಿಂತ ಮೇಲೆಂದಾಗಲೀ, ವೈಶ್ಯನು ಶೂದ್ರನಿಗಿಂತ ಶ್ರೇಷ್ಠನೆಂದಾಗಲೀ ಹೇಳಲಾರೆವು.

ಬ್ರಹ್ಮಚರ್ಯ ಆಶ್ರಮವು ಕೊನೆಗೊಂಡ ಮೇಲೆ ವರ್ಣದ ಆರಂಭವಾಗುತ್ತದೆ. ಮಾನವಧರ್ಮ ಶಾಸ್ತ್ರಕಾರರ ಮತಾನುಸಾರ ಕೆಲವು ವ್ಯಕ್ತಿಗಳ ಅಭಿರುಚಿಯನ್ನು ನೋಡಿ ಆತ ಯಾವ ವರ್ಣವನ್ನಾರಿಸಬಹುದೆಂದು ಅನುಮಾನ ಪಡಬಹುದು. ಅಂದರೆ, ಆತ ಅಧ್ಯಾಪಕನಾಗುವನೋ, ಸೈನ್ಯಕ್ಕೆ ಸೇರಿ ಅಥವಾ ಬೇರಾವುದಾದರೂ ಕೆಲಸ ಮಾಡಿ ಧನೋಪಾರ್ಜನೆ ಮಾಡುವನೆಂಬುದನ್ನು ಗೊತ್ತುಹಚ್ಚಬಹುದು. ತದನುಸಾರವೇ ಅವನ ವರ್ಣ ನಿರ್ಣಯವಾಗುತ್ತದೆ. ಆದುದರಿಂದ ಈ ವರ್ಣಗಳಿಗೂ ಜನ್ಮಕ್ಕೂ ಏನೂ ಸಂಬಂಧವಿಲ್ಲ.

ಭವಿಷ್ಯ ಪುರಾಣದಲ್ಲಿ ಬರೆದಿದ್ದಾರೆ–ದನ ಅಥವಾ ಕುದುರೆಯ ಚಿಕ್ಕ ಮರಿಯನ್ನಾದರೂ ತತ್‌ಕ್ಷಣ ಗುರುತಿಸಬಹುದಾಗಿವೆ. ಈ ವಿಷಯದಲ್ಲಿ ಯಾರಿಗೂ ಸಂದೇಹವಾಗಲಾರದು. ಆದರೆ, ಮನುಷ್ಯರಲ್ಲಿ ಈತ ಬ್ರಾಹ್ಮಣನ ಮಗು ಅಥವಾ ಕ್ಷತ್ರಿಯ, ವೈಶ್ಯ, ಶೂದ್ರನ ಮಗು ಎಂದು ಗುರುತಿಸುವುದು ಅಸಂಭವವಾಗಿದೆ—

**ತಸ್ಮಾನ್ನ ಗೋರಶ್ವವತ್ಕಶ್ಚಿತ್ ಜಾತಿಭೇದೋಽಸ್ತಿ ದೇಹಿನಾಂ ।**
**ಕಾರ್ಯಶಕ್ತಿ ನಿಮಿತ್ತಸ್ತು ಸಂಕೇತಃ ಕೃತ್ರಿಮೋ ಭವೇತ್ ॥** [೪೦--೩೫]

ವೇದವಾದರೋ **ತಪಸೇ ಶೂದ್ರಂ** ಎಂದು ಹೇಳಿ ಶೂದ್ರನನ್ನು ತಪಸ್ಸೆಂಬ ಧನದ ಸ್ವಾಮಿಯನ್ನಾಗಿ ಮಾಡಿದೆ. ತನ್ನ ಶರೀರಶಕ್ತಿಯ ಮೂಲಕ ಮಾನವ ಮಾತ್ರರ ಕಲ್ಯಾಣ ಕಾರ್ಯದಲ್ಲಿ ಹಗಲೂ ರಾತ್ರಿಯೂ ತೊಡಗಿರುವ ವರ್ಗವು ಗೌರವಕ್ಕೆ ಪಾತ್ರವಾಗಿದೆಯೇ ಹೊರತು ತಿರಸ್ಕಾರ ಅಥವಾ ಉಪೇಕ್ಷಾಪಾತ್ರವಲ್ಲ. ಹೊಲಸು ಮಾಡುವವರನ್ನು ಶ್ರೇಷ್ಠರೆಂದೂ, ಅದನ್ನು ಶುದ್ಧಪಡಿಸಿ ವಾಯುಮಂಡಲವನ್ನು ಶುದ್ಧವು ಪವಿತ್ರವಾಗಿಯೂ ಇರಿಸುವವರನ್ನು ನೀಚರೆಂದೂ ಹೇಳಿ ಸಮಾಜದಿಂದ ದೂರವಿರಿಸುವುದನ್ನು ನೋಡಿ ಆಶ್ಚರ್ಯವಾಗುತ್ತದೆ.

ಆದುದರಿಂದ ಸ್ವಾಮೀ ದಯಾನಂದರ ಅಮರ ಸಂದೇಶವನ್ನು ಆಲಿಸಿ ನಾವು ನಮ್ಮವರನ್ನು ಗುರುತಿಸೋಣ ಹಾಗೂ ಅವರು ನಮ್ಮವರು ಮತ್ತು ನಮ್ಮವರಾಗಿಯೇ ಇರುವರೆಂದೂ ಅವರನ್ನೆಂದಿಗೂ ನಾವು ಹೊರಗಟ್ಟಲು ಸಿದ್ಧರಿಲ್ಲವೆಂದು ಘಂಟಾಘೋಷವಾಗಿ ಸಾರೋಣ. ಹೀಗಾದಾಗ ಇಂದು ಹಿಂದೂ ಸಮಾಜವನ್ನು ಕಬಳಿಸುತ್ತಿರುವ ಯಾವ ಮತಾಂತರವೆಂಬ ಪಿಡುಗಿದೆಯೋ ಅದು ಸಂಪೂರ್ಣವಾಗಿ ತಡೆಯಲ್ಪಡುವುದು. ಜನಾಂಗವು, ತನ್ಮೂಲಕ ರಾಷ್ಟ್ರವೂ ಹೆಮ್ಮೆಯಿಂದ ತಲೆಯೆತ್ತಿ ನಿಂತು ಜಗತ್ತಿನ ಗೌರವವನ್ನು ಮುಗುಳ್ನಗುತ್ತಾ ಸ್ವೀಕರಿಸಬಲ್ಲದು.

---

DON'T JUST KEEP UP WITH FASHION
BE TWO STEPS A HEAD OF IT;
**WHEN YOU SHOP AT**
**CHANDARANAS**
YOU ARE ALWAYS AHEAD OF FASHION
FOR THE NEWEST & LATEST
IN FASHION FABRICS, READY—TO—WEAR & SAREES
*Visit:*
**CHANDARANA BROTHERS**
ESTD. 1935
**Hampankatta**
MANGALORE-575 001
THE PIONEER TEXTILE—DEPARTMENT STORE
WHO INTRODUCE FASHIONS AHEAD OF TIMES.

# ಶ್ರದ್ಧಾ

ಲೇ: **ಜಗದೀಶ ವಿದ್ಯಾರ್ಥಿ** ಕನ್ನಡಾನುವಾದ: **ಗುಂಡ್ಮಿ ಚಂದ್ರಶೇಖರ ಐತಾಳ**

ಜಗತ್ತಿನಲ್ಲಿ ಇಂದು ಶ್ರದ್ಧೆಯ ಸಂಬಂಧವಾಗಿ ಭ್ರಮೆ ಆವರಿಸಿದೆ. ಶ್ರದ್ಧೆ ಹಾಗೂ ತರ್ಕಗಳು ಪರಸ್ಪರ ವಿರೋಧಿ ವಸ್ತುಗಳೆಂದು ಕೆಲವರ ತಿಳಿವಳಿಕೆಯಾಗಿದೆ. ತರ್ಕವಿರುವಲ್ಲಿ ಶ್ರದ್ಧೆಯಿಲ್ಲ; ಶ್ರದ್ಧೆಯಿರುವಲ್ಲಿ ತರ್ಕವಿರುವುದಿಲ್ಲ. ಈ ತಿಳಿವಳಿಕೆ ಭ್ರಾಂತಿಪೂರ್ಣವಾದುದು. ಶ್ರದ್ಧೆಯ ಸರಿಯಾದ ಅರ್ಥ ಸ್ವರೂಪವನ್ನು ತಿಳಿಯದ ಕಾರಣ ಈ ತಪ್ಪು ತಿಳಿವಳಿಕೆ ಹಬ್ಬಿದೆ. ಎಲ್ಲದಕ್ಕಿಂತ ಮೊದಲು ಶ್ರದ್ಧೆಯ ಅರ್ಥವನ್ನು ತಿಳಿದುಕೊಳ್ಳಬೇಕಾಗುತ್ತದೆ:

**ದೃಷ್ಟ್ವಾ ರೂಪೇ ವ್ಯಾಕರೋತ್ಸತ್ಯಾನೃತೇ ಪ್ರಜಾಪತಿಃ ।**
**ಅಶ್ರದ್ಧಾ ಮನೃತೇಽದಧಾ ಚ್ಛ್ರದ್ಧಾನ್ ಸತ್ಯೇ ಪ್ರಜಾಪತಿಃ ॥**

(ಯಜುರ್ವೇದ: ೧೯–೭೭)

ಪರಮಾತ್ಮನು ಸತ್ಯ ಮತ್ತು ಸುಳ್ಳುಗಳನ್ನು ನೋಡಿ ಬೇರೆ ಬೇರೆ ಮಾಡುತ್ತಾನೆ. ಪರಮಾತ್ಮನು ಸುಳ್ಳಿನ ಬಗೆಗೆ ಶ್ರದ್ಧೆಯನ್ನು ವಹಿಸುವುದಿಲ್ಲ; ಸತ್ಯದ ಬಗೆಗೆ ಯಾವಾಗಲೂ ಶ್ರದ್ಧೆ ವಹಿಸುತ್ತಾನೆ.

ಶ್ರತ್ + ಧಾ = ಶ್ರದ್ಧಾ; ಸತ್ಯಧಾರಣೆ. ಸತ್ಯದ ಧಾರಣೆ ಪ್ರತ್ಯಕ್ಷಾದಿ ಪ್ರಮಾಣಗಳಿಂದಲೇ, ತರ್ಕದಿಂದಲೇ ಸಾಧ್ಯವಾಗುತ್ತದೆ.

ಶ್ರದ್ಧೆಯ ಅರ್ಥ ವಿವೇಚನೆಯ ಬಳಿಕ ಋಗ್ವೇದದ ಶ್ರದ್ಧಾ ಸೂಕ್ತವನ್ನು ನೋಡೋಣ:

**ಶ್ರದ್ಧಯಾಗ್ನಿಃ ಸಮಿಧ್ಯತೇ ಶ್ರದ್ಧಯಾ ಹೂಯತೇ ಹವಿಃ ।**
**ಶ್ರದ್ಧಯಾ ಭಗಸ್ಯ ಮೂರ್ಧನಿ ವಚಸಾ ವೇದಯಾಮಸಿ ॥**

(ಋಗ್ವೇದ : ೧೦-೧೫೧-೧)

ಶ್ರದ್ಧೆಯೊಡನೆ ಆತ್ಮಾಗ್ನಿ ಪ್ರದೀಪ್ತವಾಗುತ್ತದೆ. ಶ್ರದ್ಧೆಯು ಭಗದ ಮಸ್ತಿಷ್ಕದಲ್ಲಿ ವಿರಾಜಿಸುತ್ತದೆ ಎಂದು ನಾವು ಘೋಷಿಸುತ್ತೇವೆ. ಭಗ ಎಂಬುದರ ಅರ್ಥ ಈ ಕೆಳಗಿನಂತಿದೆ:

**ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಾಃ ।**
**ಜ್ಞಾನ ವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ ॥**

ಐಶ್ವರ್ಯ, ಧರ್ಮ, ಯಶಸ್, ಶ್ರೀ, ವೈರಾಗ್ಯ, ಜ್ಞಾನ — ಈ ಆರಕ್ಕೆ 'ಭಗ' ಎಂದು ಹೆಸರು. ಶ್ರದ್ಧೆ ಇವೆಲ್ಲದರ ತಲೆಯ ಮೇಲೆ ವಿರಾಜಿಸುತ್ತಿದೆ. ಶ್ರದ್ಧೆಯಿಂದಲೇ ಸಿದ್ಧಿ ದೊರಕುತ್ತದೆ.

**ಶ್ರದ್ಧಾವಾನ್ ಲಭತೇ ಜ್ಞಾನಮ್ ॥** (ಗೀತಾ : ೪-೩೯)

ಶ್ರದ್ಧಾವಂತನು ಮಾತ್ರ ಜ್ಞಾನ ಸಂಪಾದನೆ ಮಾಡುತ್ತಾನೆ, ಅಲ್ಲದೆ, ಮನುಷ್ಯ ಶ್ರದ್ಧಾಪೂರ್ಣನಾಗಬೇಕು.

**ಪ್ರಿಯಂ ಶ್ರದ್ಧೇ ದದತಃ ಪ್ರಿಯಂ ಶ್ರದ್ಧೇ ದಿದಾಸತಃ ।**
**ಪ್ರಿಯಂ ಭೋಜೇಷು ಯಜ್ವಸ್ವಿದಂ ಮ ಉದಿತಂ ಕೃಧಿ ॥**

(ಋಗ್ವೇದ : ೧೦–೧೫೧–೨)

ಶ್ರದ್ಧಾ! ದಾನ ಮಾಡುವವರಿಗೆ ಒಳ್ಳೆಯದಾಗಲಿ; ಕೊಡುವ ಇಚ್ಛೆಯುಳ್ಳವನಿಗೂ ಒಳ್ಳೆಯದಾಗಲಿ. ಊಟ ಮಾಡಿಸುವವರಲ್ಲಿ, ಯಜ್ಞ ಮಾಡುವವರಲ್ಲಿ ನನ್ನ ಯಶಃಪೂರ್ಣ ಅಭ್ಯುದಯವಾಗಲಿ.

ಮಂತ್ರದಲ್ಲಿ ಬಹಳ ಸುಂದರ ಭಾವ ವ್ಯಕ್ತವಾಗಿದೆ. ಕೊಡುವವನಿಗೆ ಹೇಗೂ ಒಳ್ಳೆಯದೇ ಆಗುತ್ತದೆ. ಅಲ್ಲದೆ ಕೊಡುವ ಇಚ್ಛೆಯುಳ್ಳವನಿಗೂ, ಕೊಡಲು ಏನೂ ಇರದವನಿಗೂ ಒಳ್ಳೆಯದಾಗಲಿ ಎಂದು ಮಂತ್ರ ಸಾರುತ್ತದೆ. ಉಪನಿಷತ್ತಿನಲ್ಲಿ ಒಂದು ಕಡೆ ಇದಕ್ಕಾಗಿಯೇ ಹೀಗೆ ಹೇಳಲಾಗಿದೆ: 'ಶ್ರದ್ಧಯಾ ದೇಯಮ್'—ಶ್ರದ್ಧೆಯಿಂದ ಕೊಡಬೇಕು. ಹಸಿದವರಿಗೆ ಅನ್ನ ನೀಡುವುದರಿಂದ, ಪರೋಪಕಾರ ಮಾಡುವುದರಿಂದ ಮನುಷ್ಯ ಲೋಕಪ್ರಿಯನೆನಿಸುತ್ತಾನೆ; ಅವನ ಕೀರ್ತಿ ಚಂದ್ರಿಕೆ ಸುತ್ತಲೂ ಹಬ್ಬುತ್ತದೆ.

**ಯಥಾ ದೇವಾ ಅಸುರೇಷು ಶ್ರದ್ಧಾಮುಗ್ರೇಷು ಚಕ್ರಿರೇ ।**
**ಏವಂ ಭೋಜೇಷು ಯಜ್ವಸ್ವಸ್ಮಾಕಮುದಿತಂ ಕೃಧಿ ॥**

(ಋಗ್ವೇದ : ೧೦-೧೫೧-೩)

ವಿದ್ವಾಂಸರು ದೇಶ ಜನಾಂಗಗಳಿಗಾಗಿ ಪ್ರಾಣವನ್ನರ್ಪಿಸುವ ವೀರರಲ್ಲಿ ಹೇಗೆ ಶ್ರದ್ಧೆಯನ್ನಿಡುವರೋ ಹಾಗೆ ಅನ್ನದಾನ ಮಾಡುವವರಲ್ಲಿಯೂ ಯಜ್ಞ ಮಾಡುವವರಲ್ಲಿಯೂ ನಮ್ಮ ಉದಯವಾಗಲಿ.

**ಶ್ರದ್ಧಾಂ ದೇವಾ ಯಜಮಾನಾ ವಾಯುಗೋಪಾ ಉಪಾಸತೇ ।**
**ಶ್ರದ್ಧಾಂ ಹೃದಯ್ಯಯಾಕೂತ್ಯಾ ಶ್ರದ್ಧಯಾ ವಿಂದತೇ ವಸು ॥**

(ಋಗ್ವೇದ : ೧೦-೧೫೧-೪)

ದಿವ್ಯ ಯಜಮಾನನು ಶ್ರದ್ಧೆಯ ಉಪಾಸನೆ ಮಾಡುತ್ತಾನೆ. ಪ್ರಾಣಾಯಾಮ ಮಾಡುವ ಯೋಗಿಗಳೂ ಶ್ರದ್ಧೆಯ ಉಪಾಸನೆ ಮಾಡುತ್ತಾರೆ. ಇವರೆಲ್ಲ ಹೃದಯದ ಉಚ್ಚ ಭಾವನೆಗಳಿಂದ ಶ್ರದ್ಧೆಯ ಸೇವೆ ಮಾಡುತ್ತಾರೆ; ಶ್ರದ್ಧೆಯಿಂದ ಪರಮಾತ್ಮ ಪ್ರಾಪ್ತಿಯಾಗುತ್ತದೆ. ವೇದದಲ್ಲಿ ಪರಮಾತ್ಮನನ್ನು 'ವಸುರ್ವಸೂನಾಮ್' (ಋಗ್ವೇದ : ೧-೯೪-೧೩) 'ವಸು' ಎಂದು ಕರೆಯಲು ಪರಮಾತ್ಮನಿಗಿಂತ ಘನನು ಯಾರಿದ್ದಾರೆ ?

ಶ್ರದ್ಧೆಯ ಮೂಲಕ ಪರಮಾತ್ಮ ಪ್ರಾಪ್ತಿಯನ್ನು ಕುರಿತು ಯಜುರ್ವೇದದಲ್ಲಿಯೂ ತುಂಬ ಸುಂದರವಾಗಿ ದರ್ಶಿಸಲಾಗಿದೆ:

**ವ್ರತೇನ ದೀಕ್ಷಯಾಪ್ನೋತಿ ದೀಕ್ಷಾಮಾಪ್ನೋತಿ ದಕ್ಷಿಣಾಮ್ ।**
**ದಕ್ಷಿಣಾ ಶ್ರದ್ಧಾಮಾಪ್ನೋತಿ ಶ್ರದ್ಧಯಾ ಸತ್ಯಮಾಪ್ಯತೇ ॥**

(ಯಜುರ್ವೇದ : ೧೯-೩೦)

ವ್ರತದಿಂದ ಮನುಷ್ಯನಿಗೆ ಅಧಿಕಾರಪ್ರಾಪ್ತವಾಗುತ್ತದೆ. ಅಧಿಕಾರದಿಂದ ಉತ್ಸಾಹ ಲಭಿಸುತ್ತದೆ. ಉತ್ಸಾಹದಿಂದ ಶ್ರದ್ಧಾಪ್ರಾಪ್ತಿಯಾಗುತ್ತದೆ. ಶ್ರದ್ಧೆಯಿಂದ ಪರಮಾತ್ಮ ಪ್ರಾಪ್ತಿಯಾಗುತ್ತದೆ.

ಈ ಶ್ರದ್ಧೆಯ ಮಹಿಮೆಯನ್ನು ಗಾನ ಮಾಡುತ್ತ ಯೋಗದರ್ಶನದ ಭಾಷ್ಯದಲ್ಲಿ ಮಹರ್ಷಿ ವ್ಯಾಸರು ಹೀಗೆ ಹೇಳಿದ್ದಾರೆ:

**ಸಾ (ಶ್ರದ್ಧಾ) ಜನನೀವ ಕಲ್ಯಾಣಂ ಯೋಗಿನಂ ಪಾತಿ ||**

ಶ್ರದ್ಧೆಯು ಯೋಗಿಯನ್ನು ಜನನಿಯಂತೆ ರಕ್ಷಿಸುತ್ತಾಳೆ. ನಮ್ಮ ಜೀವನದಲ್ಲಿ ಈ ಶ್ರದ್ಧೆ ಇರಬೇಕು. ಅದೇ ಋಗ್ವೇದದ ಶ್ರದ್ಧಾಸೂಕ್ತದ ಅಂತಿಮ ಮಂತ್ರ ಹೇಳುತ್ತದೆ:

**ಶ್ರದ್ಧಾಂ ಪ್ರಾತರ್ಹವಾಮಹೇ ಶ್ರದ್ಧಾಂ ಮಧ್ಯಂದಿನಂ ಪರಿ |**
**ಶ್ರದ್ಧಾಂ ಸೂರ್ಯಸ್ಯ ನಿಮ್ರುಚಿ ಶ್ರದ್ಧೇ ಶ್ರದ್ಧಾಪಯೇಹ ನಃ ||**

(ಋಗ್ವೇದ : ೧೦ ೧೫೧–೫)

ನಾವು ಪ್ರಾತಃಕಾಲ ಶ್ರದ್ಧಾದೇವಿಯನ್ನು ಆಹ್ವಾನಿಸುತ್ತೇವೆ. ನಾವು ಮಧ್ಯಾಹ್ನ ಕಾಲದಲ್ಲಿ ಎಲ್ಲ ದಿಕ್ಕುಗಳಿಂದಲೂ ಶ್ರದ್ಧೆಯನ್ನೇ ಬಯಸುತ್ತೇವೆ. ಸೂರ್ಯ ಅಸ್ತಂಗತನಾದ ಮೇಲೂ ನಾವು ಶ್ರದ್ಧೆಯನ್ನೇ ಕರೆಯುತ್ತೇವೆ. ಓ ಶ್ರದ್ಧಾದೇವಿ! ನಮ್ಮ ಜೀವನವನ್ನೆಲ್ಲ ಶ್ರದ್ಧೆಯಿಂದ ತುಂಬು.

ಈ ಶ್ರದ್ಧಾಸೂಕ್ತವನ್ನು ಗಂಭೀರ ಮನಸ್ಕರಾಗಿ ಮನನ ಮಾಡಿರಿ. ಶ್ರದ್ಧಾದೇವಿಯನ್ನು ನಿಮ್ಮ ಹೃದಯ ಮಂದಿರದಲ್ಲಿ ಪ್ರತಿಷ್ಠಾಪಿಸಿರಿ.

---

## ಮೇಧಾ

ವೈದಿಕ ಧರ್ಮ ಬುದ್ಧಿ ಪ್ರಧಾನ ಧರ್ಮವಾಗಿದೆ. ವೈದಿಕಧರ್ಮಿಯು ಪ್ರಾರ್ಥಿಸುತ್ತಾನೆ:

**ಸಂ ನ ಶಿಶೀಹಿ ಭುರಿಜೋರಿವ ಕ್ಷುರಮ್ ||**

(ಋಗ್ವೇದ: ೮–೪–೧೬)

ಪ್ರಭೂ! ನಮ್ಮ ಬುದ್ಧಿಯನ್ನು ಚೂರಿಯಂತೆ ಹರಿತಗೊಳಿಸು. ನಮ್ಮ ಬುದ್ಧಿಯನ್ನು ತೀಕ್ಷ್ಣಗೊಳಿಸುವುದಕ್ಕಾಗಿಯೇ ಸ್ತ್ರೀ ಪುರುಷರಿಗೂ, ಯುವಕ ಯುವತಿಯರಿಗೂ, ಬ್ರಹ್ಮಚಾರೀ ಬ್ರಹ್ಮಚಾರಿಣಿಯರಿಗೂ ಗಾಯತ್ರೀ ಮಂತ್ರದ ಉಪದೇಶವನ್ನು ಮಾಡಲಾಗುತ್ತದೆ. ಆ ಗಾಯತ್ರೀ ಮಂತ್ರ ಹೀಗಿದೆ:

**ಓಂ ಭೂರ್ಭುವಃ ಸ್ವಃ |**
**ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ|**
**ಧಿಯೋ ಯೋ ನಃ ಪ್ರಚೋದಯಾತ್ ||**

(ಯಜುರ್ವೇದ: ೩೬–೩)

ಸಚ್ಚಿದಾನಂದ ಸ್ವರೂಪನೂ, ಸರ್ವ ಜಗದುತ್ಪಾದಕನೂ, ಬಯಸಲು ಯೋಗ್ಯನೂ ಆದ ಪರಮಾತ್ಮನ ಅತಿ ಶ್ರೇಷ್ಠ ಹಾಗೂ ಧ್ಯಾನ ಮಾಡಲು ಯೋಗ್ಯ ಹಾಗೂ ಪಾಪಗಳನ್ನು

ಭಸ್ಮ ಮಾಡಬಲ್ಲ ತೇಜಸ್ಸನ್ನು ನಾವು ಧರಿಸೋಣ. ಆ ಪರಮಾತ್ಮನು ನಮ್ಮ ಬುದ್ಧಿ, ಕರ್ಮಗಳಿಗೆ ಉತ್ತಮ ಪ್ರೇರೇಪಣೆಯನ್ನು ನೀಡಲಿ.

ಇದು ಆರ್ಯರ ಪ್ರಾರ್ಥನೆಯಾಯಿತು. ಬೈಬಲಿನ ಪ್ರಾರ್ಥನೆಯನ್ನು ಕೇಳಿರಿ:

**Give us this day our daily bread.**

(ಮತ್ತಾಯ: ೬–೧೧)

ಪ್ರಭೂ! ನಮಗೆ ನೀನು ಇಂದಿನ ರೊಟ್ಟಿಯನ್ನು ನೀಡು.

ರೊಟ್ಟಿ ಪರಮಾತ್ಮನಿಂದ ಬೇಡುವ ವಸ್ತುವಲ್ಲ. 'ಶ್ರೀ ಯೋಗಿ'ಗಳು ಬಹಳ ಸುಂದರವಾಗಿ ಹೇಳಿದ್ದಾರೆ:

ದೇ ರೋಟೀ ಭಗವಾನ್ ಮುಝೇ ತೂ ಭಕ್ತ್ ಸವೇರೇ ಉಠ್‌ಕರ್ ಬೋಲಾ ।
ಝುಂಜಲಾ ಕರ್ ಚಿಲ್ಲಾಯಾ ಅಲ್ಲಾ ಕ್ಯಾ ಮೈನೇ ಢಾಬಾ ಹೈ ಖೋಲಾ ॥

ಪ್ರಭುವಿನೊಡನೆ ಕೇಳಬೇಕಾದ ವಸ್ತು ಮೇಧಾಬುದ್ಧಿಯೇ ಆಗಿದೆ. ಅಲ್ಲದೆ ವೇದದಲ್ಲಿ ಪ್ರಾರ್ಥಿಸಲಾಗಿದೆ:

**ಮೇಧಾ ಸಾಯಂ ಮೇಧಾಂ ಪ್ರಾತರ್ಮೇಧಾಂ ಮಧ್ಯಂದಿನಂ ಪರಿ ।**
**ಮೇಧಾಂ ಸೂರ್ಯಸ್ಯ ರಶ್ಮಿಭಿರ್ವಚಸಾ ವೇಶಯಾಮಹೇ ॥**

(ಅಥರ್ವ: ೬–೧೦೮–೫)

ಸಾಯಂಕಾಲ, ಪ್ರಾತಃಕಾಲ, ಮಧ್ಯಾಹ್ನ ಕಾಲಗಳಲ್ಲಿ ನಾವು ಮೇಧಾಬುದ್ಧಿಯನ್ನು ವೈದಿಕ ವಚನಗಳಿಗನುಸಾರವಾಗಿ ನಮ್ಮಲ್ಲಿ ಧರಿಸುತ್ತೇವೆ.

ನಮಗೆ ಇಂಥ ಬುದ್ಧಿ ಬೇಕು.

**ಯಾಂ ಮೇಧಾಂ ದೇವಗಣಾಃ ಪಿತರಶ್ಚೋಪಾಸತೇ ।**
**ತಯಾ ಮಾಮದ್ಯ ಮೇಧಯಾಗ್ನೇ ಮೇಧಾವಿನಂ ಕುರು ಸ್ವಾಹಾ ॥**

(ಯಜುರ್ವೇದ: ೩೨–೧೪)

ಧಾರಣವತಿಯಾದ ಮೇಧಾವೀ ಬುದ್ಧಿಯ ವಿದ್ವಾನ್, ತತ್ತ್ವದರ್ಶಿ, ಆತ್ಮಜ್ಞಾನಿ, ಸುಧಾರಕರಾದ ನೇತಾರ ಜನರು ಉಪಾಸನೆ ಮಾಡುವ ಜ್ಞಾನಸ್ವರೂಪ ಪರಮಾತ್ಮ! ನನ್ನನ್ನು ಅದೇ ಮೇಧಾಬುದ್ಧಿಯಿಂದ ಯುಕ್ತನನ್ನಾಗಿ ಮಾಡು. ನನ್ನ ಈ ಸಂಕಲ್ಪ ಸತ್ಯವಾಗಲಿ:

**ತ್ವಂ ವಿಷ್ಣೋ ಸುಮತಿಂ ವಿಶ್ವಜನ್ಯಾಮಪ್ರಯುತಾಮೇದಯಾವೋ ಮತಿಂ ದಾಃ ॥**

(ಋಗ್ವೇದ: ೭–೧೦೦–೨)

ಎಲ್ಲ ಬಯಕೆಗಳನ್ನೂ ಪೂರ್ಣವಾಗಿ ನೆರವೇರಿಸುವ ಸರ್ವ ವ್ಯಾಪಕ ಪ್ರಭೂ! ಸರ್ವಜನ ಹಿತಕಾರಿಯಾದ, ದೋಷರಹಿತವಾದ ಸದ್ಬುದ್ಧಿಯನ್ನು ನನಗೆ ನೀಡು.

---

ಯಜ್ಞೇನ ಯಜ್ಞಮಯಜಂತ ದೇವಾಃ [ಕ್ಷಿ]

# ಭಾರತದ ಪತನಕ್ಕೆ ಕಾರಣಗಳು :—

## ● ಪ್ರೊ|| ಜ್ಯೇಷ್ಠ ವರ್ಮನ್.

ಭಾರತದ ಪತನಕ್ಕೆ ಸ್ವಾಮಿ ದಯಾನಂದರು ಅನೇಕ ಕಾರಣಗಳನ್ನು ಹೇಳಿದ್ದಾರೆ. ಯಥಾ–ಅಪರಿಮಿತ ಧನ ಮತ್ತು ಯುದ್ಧ ಸಾಮಗ್ರಿಗಳು ಅಥವಾ ಸಾಮರಿಕ ಶಕ್ತಿ, ಬ್ರಾಹ್ಮಣರ ಅಥವಾ ವಿದ್ವಾಂಸರ ನೈತಿಕ ಪತನ, ಮೂರ್ಖರ ರಾಜ್ಯ, ನಿರಂಕುಶ ಪ್ರಭುತ್ವ, ದುರಭಿಮಾನ, ಅನ್ಯಾಯ, ದುರ್ಗುಣ, ದುರ್ವ್ಯಸನ, ಪ್ರಮಾದ, ಪಕ್ಷಪಾತ, ಪರಸ್ಪರ ವಿರೋಧ, ಅರ್ಥಪ್ರಧಾನ ನೀತಿ, ಯುದ್ಧ ಮತ್ತು ಯುದ್ಧದಿಂದ ಸರ್ವನಾಶ. ಈ ಎಲ್ಲಾ ಕಾರಣಗಳಿಗೂ ಒಂದು ಮೂಲಕಾರಣವಿದೆ. ಇವೆಲ್ಲಾ ಧರ್ಮಲೋಪದ ಲಕ್ಷಣಗಳು. ಆದುದರಿಂದ ಪತನಕ್ಕೆ ಕಾರಣ ಅಧರ್ಮವೆಂದು ನಿಶ್ಚಯವಾಗಿ ಹೇಳಬಹುದು. ಅಧರ್ಮದ ಎಲ್ಲಾ ಲಕ್ಷಣಗಳೂ, ಪತನದ ಎಲ್ಲಾ ಕಾರಣಗಳೂ ಮಹಾಭಾರತದ ಯುದ್ಧಕ್ಕಿಂತ ಮೊದಲೇ ಇದ್ದುವು. ಅವೆಲ್ಲಾ ಮಹಾಭಾರತದ ಯುದ್ಧದ ರೂಪದಲ್ಲಿ ಪರಿಣತಿಯನ್ನು ಹೊಂದಿದುವು. ಮಹಾಭಾರತ ಯುದ್ಧವು ವಿಶ್ವಯುದ್ಧವಾಗಿತ್ತು. ಭಾರತವು ಅದರ ಯುದ್ಧಕ್ಷೇತ್ರವಾಗಿತ್ತು. ಆ ಯುದ್ಧದ ಭಯಂಕರ ದುಷ್ಪರಿಣಾಮಗಳಿಂದ ಭಾರತವು ಇನ್ನೂ ಬಿಡುಗಡೆಯನ್ನು ಹೊಂದಲಿಲ್ಲ. ಯುದ್ಧದಿಂದಾಗಬಹುದಾದ ದುಷ್ಪರಿಣಾಮಗಳ ಬಗ್ಗೆ ಅರ್ಜುನನು ಮೊದಲೇ ಶ್ರೀಕೃಷ್ಣನನ್ನು ಎಚ್ಚರಿಸಿದ್ದನು. ಈ ವಿಷಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಉತ್ತರ ಕೊಡಲು ಅಸಮರ್ಥನಾಗಿದ್ದನು. ಆದುದರಿಂದಲೇ ಶ್ರೀಕೃಷ್ಣನು ಕೇವಲ ಕ್ಷಾತ್ರಧರ್ಮದ ಆಶ್ರಯ ಪಡೆದು ಅರ್ಜುನನನ್ನು ಯುದ್ಧಕ್ಕೆ ಪ್ರೋತ್ಸಾಹಿಸಿದ್ದನು. ಆದರೆ, ಯುದ್ಧದಿಂದಾಗಬಹುದಾದ ಏನೆಲ್ಲಾ ಅನರ್ಥಗಳನ್ನು ಅರ್ಜುನನು ವರ್ಣಿಸಿದ್ದಾನೋ ಅವೆಲ್ಲಾ ಈಗ ಸತ್ಯವೆಂದೇ ತೋರುತ್ತವೆ.

ಮಹಾಭಾರತವನ್ನು ಯಾಕೋ ಧರ್ಮ ಯುದ್ಧವೆಂದು ಹೇಳುತ್ತಾರೆ. ಆದರೆ, ನಿಜವಾಗಿ ನೋಡಿದರೆ, ಅದು ಧರ್ಮಯುದ್ಧವೂ ಆಗಿದ್ದಿಲ್ಲ, ಸಾಂಪ್ರದಾಯಿಕ ಯುದ್ಧವೂ ಆಗಿದ್ದಿಲ್ಲ. ಕೌರವರ ಮತ್ತು ಪಾಂಡವರ ಧರ್ಮವು ಒಂದೇ ಆಗಿತ್ತು. ಅವರೆಲ್ಲಾ ವೈದಿಕ ಧರ್ಮಾವಲಂಬಿಗಳಾಗಿದ್ದರು; ಈಶ್ವರವಾದಿಗಳಾಗಿದ್ದರು; ಕರ್ಮಫಲದ ಸಿದ್ಧಾಂತವನ್ನು ನಂಬುವವರಾಗಿದ್ದರು. ಯುದ್ಧಕ್ಕೆ ಕಾರಣ, ಸ್ವಾರ್ಥ, ರಾಜ್ಯ ಅಥವಾ ಅಧಿಕಾರವಾಗಿತ್ತು; ದುರಭಿಮಾನ ಅಥವಾ ದರ್ಪವಾಗಿತ್ತು; ದ್ವೇಷ ಅಥವಾ ಸೇಡು ತೀರಿಸುವ ಭಾವನೆಯಾಗಿತ್ತು. ಧರ್ಮ ಅಥವಾ ನ್ಯಾಯ ತೀರ್ಮಾನ ಮಾಡಲು ಸರ್ವಮಾನ್ಯ ವಿದ್ವಾಂಸರು ಆಗ ಯಾರೂ ಕಂಡುಬರಲಿಲ್ಲ. ಖಡ್ಗದ ಬಲದಿಂದಲೇ ನ್ಯಾಯತೀರ್ಮಾನವಾಗಬೇಕಿತ್ತು. ಬ್ರಹ್ಮಶಕ್ತಿ ಮತ್ತು ಕ್ಷಾತ್ರಶಕ್ತಿಗಳು ಒಂದಕ್ಕೊಂದು ನೆರವಾಗಿ ನಡೆಯುವ ಕಾಲ ಕಳೆದುಹೋಗಿತ್ತು. ಕಣ್ಣೊಂದು ಕಡೆ ನೋಡುತ್ತಿತ್ತು ಮತ್ತು ಕಾಲು ಇನ್ನೊಂದು ಕಡೆ ನಡೆಯುತ್ತಿತ್ತು. ಮುಂದೆ ಬಾವಿ! ಅದಕ್ಕೆ ಬಿದ್ದು ಸರ್ವನಾಶವಾಗಿಹೋಯಿತು. ಇದು ಮಹಾಭಾರತದ ಕಾಲೀನ ಜನರ ಸ್ಥಿತಿಯಾಗಿತ್ತು. ಯುದ್ಧದಿಂದಾಗಿ ಬ್ರಹ್ಮ ಮತ್ತು ಕ್ಷಾತ್ರ ಬಲಗಳೆರಡೂ ನಷ್ಟ

ವಾಗಿ ಹೋದುವು. ಬ್ರಾಹ್ಮಣ ಮತ್ತು ಕ್ಷತ್ರಿಯ ಧರ್ಮಗಳಂತೂ ಅದಕ್ಕಿಂತ ಮೊದಲೇ ಲುಪ್ತವಾಗಿ ಹೋಗಿದ್ದುವು.

ದ್ರೋಣಾಚಾರ್ಯರು ಬ್ರಾಹ್ಮಣರಾಗಿದ್ದರು, ವಿದ್ವಾಂಸರಾಗಿದ್ದರು. ಆದರೆ ಅವರ ಬ್ರಹ್ಮವರ್ಚಸ್ಸು ಪರಾಧೀನವಾಗಿತ್ತು. ಅದು ಕ್ಷತ್ರಿಯರ ಅಧೀನದಲ್ಲಿತ್ತು. ಅವರು ಸೇನಾಪತಿಯಾಗಿದ್ದರು. ಸೇನೆಯ ಕೆಲಸ ಯುದ್ಧ ಮಾಡುವುದು. ಯುದ್ಧವು ಉಚಿತವೋ ಅನುಚಿತವೋ ಎಂದು ವಿಚಾರಿಸುವ ಅಧಿಕಾರ ಸೇನೆಗೆ ಇದ್ದಿಲ್ಲ. ನೀತಿ ನಿರ್ಣಯದ ಅಧಿಕಾರವು ರಾಜನ ಕೈಯಲ್ಲಿತ್ತು. ರಾಜನು ಸ್ವತಂತ್ರನಾಗಿದ್ದನು. ಭೀಷ್ಮಾಚಾರ್ಯರ ಸ್ಥಿತಿಯೂ ಇದೇ ರೀತಿಯಾಗಿತ್ತು. ಅಷ್ಟು ದೊಡ್ಡ ವಿದ್ವಾಂಸ, ಧರ್ಮವಾದಿ, ಧುರ್ಯೋಧನನ ಆಜ್ಞಾ ಪಾಲಕರಾಗಿದ್ದರು.

ಧುರ್ಯೋಧನನು ಧರ್ಮದ ಆಧಾರದ ಮೇಲೆ ನೀತಿನಿರ್ಣಯ ಮಾಡಲಿಲ್ಲ. 'ಯತೋ ಧರ್ಮಸ್ತತೋ ಜಯಃ' ಎಂಬ ಮಾತು ಮಹಾಭಾರತದಲ್ಲಿ ಅನೇಕ ಬಾರಿ ಬಂದಿರುವುದಾದರೂ, ಧರ್ಮದ ಸ್ವರೂಪವೇನೆಂದು ಯಾರಿಗೂ ಗೊತ್ತಿದ್ದಿಲ್ಲ. ಕೆಲವು ಆದರ್ಶ ವಾಕ್ಯಗಳನ್ನು ಜನರು ಗಿಳಿಪಾಠ ಮಾಡಿಕೊಂಡಿದ್ದರಷ್ಟೇ. ಅದರರ್ಥವನ್ನು ತಿಳಿದವರು ಬಹಳ ಕಡಿಮೆ. ಯಾಕೆಂದರೆ, ಧರ್ಮದ ಮೂಲವಾದ ವೇದವನ್ನು ಅಧ್ಯಯನ ಮಾಡುವ ಪರಂಪರೆಯು ನಿಂತುಹೋಗಿತ್ತು. ಉದಾಹರಣೆಗಾಗಿ, ಜೂಜಾಡುವುದನ್ನು ವೇದವು ವಿರೋಧಿಸುತ್ತದೆ. ಜೂಜಾಡಬೇಡ, ಕೃಷಿ ಮಾಡು, ಎಂದು ಋಗ್ವೇದವು ಸ್ಪಷ್ಟವಾಗಿ ಹೇಳುತ್ತದೆ. ಆದರೆ, ರಾಜಕುಮಾರರು ಜೂಜಾಟವಾಡುತ್ತಾರೆ. ನ್ಯಾಯ-ಅನ್ಯಾಯಗಳ ನಿರ್ಣಯವು ಜೂಜಿನ ಕವಡೆಗಳ ಮೂಲಕ ಆಗಬೇಕೆಂದಿತ್ತು. ಒಬ್ಬ ಸಾಮಾನ್ಯ ರೈತನಿಗಿರುವಷ್ಟು ಬುದ್ಧಿಯೂ ಆ ರಾಜಕುಮಾರರಿಗಿರಲಿಲ್ಲ. ಆದುದರಿಂದ ಸರ್ವನಾಶವಲ್ಲದೆ ಬೇರೇನು ಆಗಬಹುದಾಗಿತ್ತು? ಮಹಾಭಾರತ ಯುದ್ಧವು ನಿಜವಾಗಿಯೂ ಜೂಜಾಟದಿಂದಲೇ ಪ್ರಾರಂಭವಾಗಿತ್ತು. [ಕ್ರಮಶಃ]

---

## ಗಂಗಾ ಜಲದ ಮಹತ್ವ

● ಪಿ. ಕೆ. ಬಂಗೇರ, ಮುಂಬಯಿ

ಗಂಗಾ ಜಲದ ಮಹತ್ವದ ಪರವಾಗಿ ವಿಚಾರ ಮಾಡಿದರೆ ಅದು ಪಾಪನಾಶಿನಿಯೆಂಬುದು ಅತೀ ಪ್ರಾಚೀನ ಕಾಲದಿಂದಲೇ ಪ್ರಸಿದ್ಧವಿದ್ದ ವಿಷಯ. ಭಾರತೀಯ ಸಂಸ್ಕೃತಿಯಲ್ಲಿ ಸಮಸ್ತ ನದಿಗಳಿಗಿಂತ ಗಂಗಾ ನದಿಯ ಸ್ನಾನವು ಬಹಳ ಮಹತ್ವಪೂರ್ಣವಾಗಿದೆ. ಆಯುರ್ವೇದ ಗ್ರಂಥವೆನಿಸುವ ಚರಕದಲ್ಲಿ "ಹಿಮವತ್ಪ್ರಭವಾಃ ಪಥ್ಯಾಃ" ಅಂದರೆ ಹಿಮಾಲಯದಿಂದ ಹೊರಟ ಗಂಗಾ ಜಲವು ಪಥ್ಯವಾಗಿರುತ್ತದೆಂದು ಬರೆದಿದೆ. ಯಾಕೆಂದರೆ "ಪುಣ್ಯಾ ದೇವರ್ಷಿ ಸೇವಿತಾಃ" ಅದನ್ನು ದೇವತೆಗಳು ಸೇವಿಸುವುದರಿಂದ ಅದು ಪುಣ್ಯಮಯವಾಗಿರುತ್ತದೆಂದಿದೆ. ಎಂಟನೆ ಶತಮಾನದ ವಾಗ್ಭಟಕೃತ ಅಷ್ಟಾಂಗ ಹೃದಯದಲ್ಲಿ "ಹಿಮವನ್ಮಲಯೋದ್ಭೂತಾಃ ಪಥ್ಯಾಸ್ತಾ ಏವ ಚ ಸ್ಥಿರಾ:" ಅದು ಹಿಮಾಲಯದಿಂದ ಹುಟ್ಟಿ ಬರುವುದರಿಂದ

## ಆತ್ಮ ವಿಕಾಸಕ್ಕಾಗಿ ಜೀವನ ರಥವನ್ನೇರೋಣ

ಓಂ ತ್ರಿವಂಧುರೇಣ ತ್ರಿವೃತಾ
ರಥೇನ ತ್ರಿಚಕ್ರೇಣ ಸುವೃತಾ ಯಾತಮರ್ವಾಕ್ ।
ಪಿನ್ವತಂ ಗಾ ಜಿನ್ವತಮರ್ವತೋನೋ
ವರ್ಧಯತ ಮಶ್ವಿನಾ ವೀರಮಸ್ಮೇ॥ [ಋಗ್: ೧-೧೧೮-೨]

"ನರನಾರಿಯರೇ! ಮೂರು ಬಂಧನಗಳಿಂದ ಕೂಡಿದ, ಮೂರು ಚಕ್ರಗಳನ್ನುಳ್ಳ, ಒಳ್ಳೆಯತನದಿಂದ ಆವೃತವಾದ ಮೂರು ಆವರಣಗಳಿಂದ ಕೂಡಿದ ಜೀವನ ರಥವನ್ನೇರಿ, ಮುಂದೆ ಮುಂದೆ ಸಾಗಿರಿ. ಇಂದ್ರಿಯಗಳನ್ನೂ ವಾಕ್ಶಕ್ತಿಯನ್ನೂ ಬಲಪಡಿಸಿರಿ. ನಮ್ಮ ಚೇತನವಾದ ಆತ್ಮಗಳನ್ನು ವಿಕಾಸಗೊಳಿಸಿರಿ. ಈ ಆತ್ಮನಿಗಾಗಿ ಪ್ರಾಣ ಶಕ್ತಿಯನ್ನೂ ವರ್ಧಿಸಿರಿ."

ಈ ವೇದ ವಾಣಿಯ ಪ್ರಕಾರ ಜೀವನವೆಂಬ ರಥಕ್ಕೆ ದೇವಋಣ, ಪಿತೃಋಣ, ಋಷಿಋಣವೆಂಬ ಮೂರು ಬಂಧನಗಳಿವೆ. ಜ್ಞಾನ, ಕರ್ಮ, ಉಪಾಸನೆ-ಎಂಬ ಮೂರು ಚಕ್ರಗಳಿವೆ. ಒಳ್ಳೆಯತನ ಅಡಕ್ಕೆ ರಕ್ಷಣೆ ನೀಡುವ ಹೊದಿಕೆಯಾಗಿದೆ, ಮನಶ್ಶುದ್ಧಿ, ವಾಕ್ಶುದ್ಧಿ ಮತ್ತು ದೇಹ ಶುದ್ಧಿಗಳೆಂಬ ಮೂರು ಆವರಣಗಳಿವೆ. ಸ್ತ್ರೀ ಪುರುಷರೇ! ಈ ದಿವ್ಯವಾದ ರಥವನ್ನೇರಿ ಮುನ್ನಡೆಯಿರಿ. ಇಂದ್ರಿಯ, ವಾಣಿಗಳನ್ನೂ, ಪ್ರಾಣಶಕ್ತಿಯನ್ನೂ ವರ್ಧಿಸಿಕೊಂಡು ಆತ್ಮ ವಿಕಾಸವನ್ನು ಸಾಧಿಸಿರಿ.

ಈ ರೀತಿ ಜೀವನ ರಥವನ್ನೇರುವಾಗ ದೇಹದ ಶೋಭೆಗೆ ಉತ್ತಮವೂ, ಆಕರ್ಷಣೀಯವೂ ಆದ ಉಡುಪು ಬೇಕೇಬೇಕು. ಈ ಅವಶ್ಯಕತೆಯನ್ನು ಪೂರೈಸಲು ಮಂಗಳೂರು ನಗರದ ಕೇಂದ್ರ ಸ್ಥಾನದಲ್ಲಿ ಸುಸಜ್ಜಿತವಾದ ಎಲ್ಲಾ ತರದ ಬಟ್ಟೆಗಳಿಗೆ ಹೆಸರಾಂತ ಜವುಳಿ ಮಳಿಗೆ—

# ಕುಲಾಬ್ಯಡಿಕಾರ್ಸ್
# ನೂತನ್ ಸಿಲ್ಕ್ಸ್

**ಹಂಪನಕಟ್ಟೆ, ಮಂಗಳೂರು, ದ. ಕ.**

ಆದರ ಜಲವು ಔಷಧಿ ರೂಪದಂತೆ ಪಥ್ಯವಾಗಿರುತ್ತದೆ. ಇದೇ ಮಾತನ್ನು ಕ್ರಿಸ್ತ ಶಕ ೧೦೬೦ ರಲ್ಲಿದ್ದ ಚಕ್ರಪಾಣಿದತ್ತರು ಕೂಡಾ "ಯಥೋತ್ಯಲ್‌ಕ್ಷಣ ಹಿಮಾಲಯ ಭವತ್ವಾ ದೇವ ಗಂಗಾವ್ ಪಥ್ಯಮ್" ಯೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಪೂನಾದಲ್ಲಿರುವ ಭಂಡಾರ್‌ಕರ್ ಓರಿಯಂಟಲ್ ಇನ್‌ಸ್ಟ್ಯೂಟ್‌ನಲ್ಲಿ ೧೬ನೆಯ ಶತಮಾನದ "ಭೋಜನ ಕುತೂಹಲ" ಹೆಸರಿನ ಒಂದು ಹಸ್ತಲಿಪಿ ಗ್ರಂಥವಿದೆ, ಆದರಲ್ಲಿ—

ಶೀತಂ ಸ್ವಾದು ಸ್ವಚ್ಛಮತ್ಯನ್ತರೂಚ್ಯಂ ಪಥ್ಯಂ ಪಾಕ್ಯಂ
ಪಾಚನಂ ಪಾಪಹಾರಿ। ತೃಷ್ಣಾ ಮೋಹಾಧ್ವಂಸನಂ ದೀಪನಂ
ಚ ಪ್ರಜ್ಞಾಂ ಧತ್ತೇವಾರಿ ಭಾಗೀರಥೀಯಮ್ ॥

ಅಂದರೆ ಗಂಗಾಜಲವು ಶೀತಲ, ಸ್ವಚ್ಛ, ಅತ್ಯಂತ ರುಚಿಕರ, ಭೋಜನ ತಯಾರಿಸುವುದಕ್ಕೆ ಯೋಗ್ಯ, ಜೀರ್ಣಶಕ್ತಿ ವೃದ್ಧಿಯುಕ್ತ, ಸಮಸ್ತ ಪಾಪವನ್ನು ನಾಶಮಾಡತಕ್ಕ, ತೃಷೆ ನಿವಾರಣೆ ಮಾಡತಕ್ಕ, ಮೋಹನಾಶಕ ಮತ್ತು ಬುದ್ಧಿ ವೃದ್ಧಿಮಾಡತಕ್ಕದೆಂಬುದಾಗಿ ಬರೆದಿದೆ. ಈ ಪ್ರಕಾರ ಗಂಗಾಜಲವನ್ನು ಸ್ವಾಥ್ಯ ಸಮ್ಮಂಧಕ್ಕೆ ಮಹತ್ವ ಕೊಟ್ಟದ್ದರಿಂದ ಹಿಂದೂಗಳ ಹೊರತು ಮುಸಲ್ಮಾನರು ಮತ್ತು ವಿದೇಶಿಗಳು ಕೂಡಾ ಆದರ ಜಲವನ್ನು ಉಪಯೋಗಿಸುತ್ತಿದ್ದರು. ಇಬ್ನಬತೂತಾ ಎಂಬವನು ೧೩೨೫ರಿಂದ ೧೩೫೪ರ ವರೇಗೆ ಆಫ್ರೀಕಾ ಹಾಗೂ ಏಶಿಯಾದ ಹಲವು ದೇಶಗಳ ಯಾತ್ರೆಮಾಡಿ ಭಾರತಕ್ಕೂ ಬಂದಿದ್ದನು. ಆತನು ತನ್ನ ಯಾತ್ರಾ ವರ್ಣನೆಯಲ್ಲಿ ಬರೆದ ಮಾತಿದು. ಸುಲ್ತಾನ್ ಮುಹಮ್ಮದ್ ತುಗಲಕನ ಬಗ್ಗೆ ದಿನಂಪ್ರತಿ ಗಂಗಾಜಲವು ದೌಲತಾಬಾದಿಗೆ ಬರುತಿತ್ತು. ಗಂಗಾನದಿಯ ಜಲವು ದೌಲತಾಬಾದಿಗೆ ಮುಟ್ಟಬೇಕಾದರೆ ಮಧ್ಯದಲ್ಲಿ ೪೦ ದಿನಗಳು ಬೇಕಾಗುತಿತ್ತು. (ಗೀಪ್ಸ್‌ಕೃತ ಇಂಗ್ಲಿಷ್ ಅನುವಾದದ ಪುಟ ೪೩) ಮುಗಲ್ ಬಾದಶಾಹ ಅಕ್ಬರನಿಗೆ ಗಂಗಾಜಲದಲ್ಲಿ ಬಹಳ ಪ್ರೇಮವಿತ್ತು. ಅಬ್ದುಲ್ ಫಜಲ್ ತನ್ನ "ಆಯಿನೆ ಅಕ್‌ಬರಿ"ಯಲ್ಲಿ ಹೀಗೆ ಬರೆದಿದ್ದಾನೆ—ಬಾದಶಾಹನು ಗಂಗಾಜಲವನ್ನು ಅಮೃತವೆಂದು ತಿಳಿದಿದ್ದನು. ಆದರ ಯೋಗ್ಯ ವ್ಯವಸ್ಥೆಗಾಗಿ ಆತನು ತನ್ನ ವಿಶ್ವಾಸಪಾತ್ರರಾದ ಜನರನ್ನು ಗಂಗಾತೀರದಲ್ಲಿ ಇಟ್ಟದ್ದನು. ಅವರು ಗಂಗಾಜಲವನ್ನು ಪಾತ್ರೆಗಳಲ್ಲಿ ತುಂಬಿಸಿ ಅದರ ಬಾಯಿ ಮುಚ್ಚಿ ಅದಕ್ಕೆ ಮೊಹರು ಹಾಕಿ ಕಳುಹಿಸಿಕೊಡುತ್ತಿದ್ದರು. ಆತನು ಅರಮನೆಯಲ್ಲಿರುವಾಗ ಮತ್ತು ಯಾತ್ರೆಗೆ ಹೋದಲ್ಲಿ ಅದನ್ನೇ ಉಪಯೋಗ ಮಾಡುತ್ತಿದ್ದನು. ಬಾದಶಾಹನು ರಾಜಧಾನಿಯಾದ ಆಗ್ರ, ಫತೇಹಪುರ ಮತ್ತು ಸೀಕರಿಯಲ್ಲಿರುತ್ತಿರುವಾಗ ಗಂಗಾಜಲವು ಸೊರೊ ಎಂಬಲ್ಲಿಂದ ಬರುತಿತ್ತು ಪಂಜಾಬಿಗೆ ಹೋದಾಗ ಹರಿದ್ವಾರದಿಂದ ತರುತ್ತಿದ್ದರು. ಅಡಿಗೆ ಮಾಡುವ ಬಗ್ಗೆ ಮಳೆಯ ನೀರು ಅಥವಾ ಯಮುನಾ ನದಿಯ ಜಲಕ್ಕೆ ಸ್ವಲ್ಪ ಗಂಗಾಜಲವನ್ನು ಸೇರಿಸಿ ಉಪಯೋಗ ಮಾಡುತ್ತಿದ್ದರು. ಅಕ್ಬರನ ಧಾರ್ಮಿಕ ಭಾವನೆಯೇ ಪ್ರತ್ಯೇಕವಾಗಿದ್ದುದರಿಂದ ಆತನು ಗಂಗಾಜಲದಲ್ಲಿ ಅಷ್ಟೊಂದು ಶ್ರದ್ಧೆ ಇಟ್ಟಿರುವುದರಲ್ಲಿ ಆಶ್ಚರ್ಯವಿಲ್ಲ.

ಅದೇಕೆ! ಮುಸಲ್ಮಾನ್ ಧರ್ಮದಲ್ಲಿ ದೃಢ ವಿಶ್ವಾಸವಿಟ್ಟಿರುವ ಔರಂಗಜೇಬನಿಗೆ ಕೂಡಾ ಗಂಗಾಜಲದ ಹೊರತು ಅವನ ದೈನಂದಿನ ಕಾರ್ಯ ಪೂರ್ಣವಾಗುತ್ತಿದ್ದಿಲ್ಲ. ಫ್ರಾನ್ಸಿನ ಯಾತ್ರಿಯಾದ ಬರ್ನಿಯರ್‌ಯೆಂಬುವನು ೧೬೫೯ರಿಂದ ೧೬೬೭ ತನಕ ಭಾರತದಲ್ಲಿದ್ದನು.

ಅವನು ಔರಂಗಜೇಬನ ಅಣ್ಣನಾದ ದಾರಾಶಿಕೋಹನ ಚಿಕಿತ್ಸಕನಾಗಿದ್ದನು. ಅವನು ತನ್ನ ಯಾತ್ರಾ ವಿವರಣೆಯಲ್ಲಿ ಬರೆದ ಮಾತಿದು-ಡಿಲ್ಲಿ ಮತ್ತು ಆಗ್ರದಲ್ಲಿರುತ್ತಿರುವಾಗ ಔರಂಗಜೇಬನ ಭೋಜನದ ಜೊತೆಯಲ್ಲಿ ಕುಡಿಯಲಿಕ್ಕೆ ಗಂಗಾಜಲವೂ ಬರುತಿತ್ತು; ಯಾತ್ರೆಯಲ್ಲಿ ಸಹಾ ಅದರ ಉಪಯೋಗ ಮಾಡುತ್ತಿದ್ದನಲ್ಲದೆ, ಅರಮನೆಯ ಅನ್ಯ ಜನರು ಸಮೇತ ಅದೇ ಜಲವನ್ನು ಉಪಯೋಗಿಸುತ್ತಿದ್ದರು. ಒಂಟೆಗಳ ಮೇಲೆ ಹೊರಿಸಿಕೊಂಡು ಗಂಗಾಜಲವನ್ನು ತರುತ್ತಿದ್ದರು. ಪ್ರತಿದಿನ ಪ್ರಾತಃಕಾಲದ ಫಲಹಾರದೊಂದಿಗೆ ಒಂದು ಸುರಾಹಿ ಗಂಗಾಜಲ ಕೂಡಾ ಬರುತಿತ್ತೆಂದು ಬರೆದಿದೆ. ಫ್ರಾನ್ಸಿನ ಮತ್ತೊಬ್ಬ ಯಾತ್ರಿ ಜೈವರ್ನಿಯನು ಕೂಡಾ ಆ ಸಮಯ ಭಾರತಕ್ಕೆ ಬಂದಿದ್ದನು. ಅವನು ಬರೆದ ಅಭಿಪ್ರಾಯವಿದು—ಗಂಗಾಜಲದಲ್ಲಿರುವ ಸ್ವಾಸ್ಥ್ಯ ಸಂಬಂಧದ ಗುಣಗಳನ್ನು ಕಂಡು ಮುಸಲ್ಮಾನ ನವಾಬರು ಕೂಡಾ ಅದರ ಉಪಯೋಗಮಾಡುತ್ತಿದ್ದರೆಂದಿದೆ. ಬ್ರಿಟಿಷ್ ಸೇನೆಯ ಕ್ಯಾಪ್ಟನ್ ಟಿಪ್ಪು ಸುಲ್ತಾನನ ಜೊತೆಯಲ್ಲಿದ್ದುಕೊಂಡು ಯುದ್ಧದಲ್ಲಿ ಭಾಗವಹಿಸಿದ್ದ ಎಡ್‌ವರ್ಡ್ ಮೂರ್ ಎಂಬವನು ಸಬನ್ನೂರಿ (ಶಾಹ್‌ನವರ್)ನ ನವಾಬನು ಕುಡಿಯುವ ಬಗ್ಗೆ ಗಂಗಾಜಲವನ್ನೇ ಉಪಯೋಗಿಸುತ್ತಿದ್ದನು. ಅದನ್ನು ತರುವ ಸಲುವಾಗಿ ಕೆಲವು ಒಂಟೆಗಳ ಜೊತೆಯಲ್ಲಿ ವಿಶ್ವಾಸಪಾತ್ರ ಜನರ ವ್ಯವಸ್ಥೆ ಇತ್ತೆಂದು ಬರೆದಿದ್ದಾನೆ. (ನೌರೇಟಿವ್ ಪುಟ ೨೪೮) ಶ್ರೀ ಗುಲಾಮ್ ಹುಸೇನನು ತನ್ನ ಬಂಗಾಲದ ಇತಿಹಾಸ "ರಿಯಾಜು-ಸ-ಸಲಾತೀನ್"ನಲ್ಲಿ ಬರೆದ ಮಾತಿದು—ಮಧುರತೆ, ರುಚಿಕರ ಮತ್ತು ಹಗುರತೆಯಲ್ಲಿ ಗಂಗಾಜಲಕ್ಕೆ ಸರಿಸಮಾನವಾದ ಬೇರೆ ಜಲವೇ ಇರಲಾರದು. ಅದನ್ನು ಎಷ್ಟೋ ದಿನಗಳ ವರೇಗೆ ತೆಗೆದಿಟ್ಟರೂ ಅದು ಹಾಳಾಗುವುದಿಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾನೆ. ಶ್ರೀ ವೆಂಕಟೇಶ್ವರ ಒರಿಯಂಟಲ್ ಇನ್‌ಸ್ಟಿಟ್ಯೂಟ್, ತಿರುಪತಿಯ ಪತ್ರಿಕೆಯಾದ "ಅನಾಲ್ಸ್" ಖಂಡ ೧ ಭಾಗ ೩ (ಸಪ್ಟಂಬರ, ೧೯೪೦) ರಲ್ಲಿ ಪೂನದ ಶ್ರೀ ಗೋಡ್‌ಕಾಯೆಂಬವರು "ಮುಸಲ್ಮಾನ್ ಶಾಸಕರ ಮೂಲಕ ಗಂಗಾಜಲದ ವ್ಯವಹಾರ" ಹೆಸರಿನ ಒಂದು ಒಳ್ಳೆಯ ಲೇಖನವನ್ನು ಬರೆದಿದ್ದಾರೆ. ಅದರಲ್ಲಿ ಅವರು ಗಂಗಾಜಲದ ಮಹತ್ವವನ್ನು ನಾವು, ನಮ್ಮ ಪೂರ್ವಜರೇ ಅಲ್ಲ-ಅಹಿಂದುಗಳಾಗಿರುವ ಮುಸಲ್ಮಾನರು ಕೂಡಾ ತಿಳಿದು ಅದರ ಉಪಯೋಗ ಮಾಡುತ್ತಿದ್ದರೆಂಬುದನ್ನು ಬಹಳ ವಿಸ್ತಾರಪೂರ್ವಕ ವಿವರಿಸಿದ್ದಾರೆ.

ಜೈಬರ್ನಿಯ ಯಾತ್ರಾವಿವರಣೆಯಿಂದ ಗೊತ್ತಾದ ಮತ್ತೊಂದು ವಿಷಯವೆಂದರೆ ಆಗಿನ ಕಾಲದ ಹಿಂದುಗಳ ವಿವಾಹಗಳಲ್ಲಿ ಭೋಜನದ ನಂತರ ಅತಿಥಿಗಳಿಗೆ ಕುಡಿಯಲಿಕ್ಕೆ ಗಂಗಾ ಜಲವನ್ನು ಕೊಡುವ ಪದ್ಧತಿಯಿತ್ತು. ದೊಡ್ಡ-ದೊಡ್ಡ ಶ್ರೀಮಂತರ ಮದುವೆಗಳಲ್ಲಿ ಹೆಚ್ಚೆಚ್ಚು ಗಂಗಾಜಲದ ಉಪಯೋಗ ಮಾಡುತ್ತಿದ್ದರು. ಅದನ್ನು ತರಿಸುವುದಕ್ಕಾಗಿ ತುಂಬಾ ಹಣ ಖರ್ಚು ಮಾಡಬೇಕಾಗಿತ್ತು. ಒಂದೊಂದು ಮದುವೆಯಲ್ಲಿ ಗಂಗಾಜಲಕ್ಕಾಗಿ ಎರಡು-ಮೂರು ಸಾವಿರ ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದರು. ಜೈಬರ್ನಿಯ ಅಭಿಪ್ರಾಯ ಮೇರೆಗೆ ಬಹಂಗೀ (ಕಾವಡಿ) ಗಳ ಮೂಲಕ ಪೂನಕ್ಕೆ ಪೇಶ್ವೆಯರಿಗೆ ಗಂಗಾ ಜಲವು ಬರುತಿತ್ತೆಂದು ಬರೆದಿದ್ದಾನೆ. ಮರಾಠಿ ಪುಸ್ತಕ "ಪೇಶ್‌ವಾಯಿಂಚ್ಯಾ ಸಾವಲೀಂತ್" (ಪೂನಾ, ೧೯೩೭)ನಿಂದ ಗೊತ್ತಾಗುವುದೇನೆಂದರೆ-ಕಾಶಿಯಿಂದ ಪೂನಾದವರೇಗೆ ಒಂದು

ಬಹಂಗೀ ಗಂಗಾಜಲ ಬರಬೇಕಾದರೆ ೨೦ ರೂಪಾಯಿ ಖರ್ಚು ತಾಗುತಿತ್ತು. ಪೂನಾದಿಂದ ರಾಮೇಶ್ವರಕ್ಕೆ ತೆಗೆದುಕೊಂಡು ಹೋಗಬೇಕಾದರೆ ೪೦ ರೂಪಾಯಿ ವೆಚ್ಚವಾಗುತಿತ್ತು. ಆಗಿನ ಕಾಲದಲ್ಲಿ ಅದು ಅಷ್ಟೊಂದು ಹೆಚ್ಚೆಂದಾಗುತ್ತಿದ್ದಿಲ್ಲ. ಗಢಮುಕ್ತೇಶ್ವರ, ಹರಿದ್ವಾರ ದಿಂದಲೂ ಪೇಶ್ವೆಯವರಿಗೆ ಗಂಗೋದಕ ಬರುತಿತ್ತು. ಶ್ರೀ ಬಾಜೀರಾವ್ ಪೇಶ್ವೆಗೆ ಗಂಗಾ ಜಲದ ಸೇವನೆಯಿಂದ ಋಣ-ಮುಕ್ತರಾಗುತ್ತದೆಂದು ಹೇಳುತ್ತಿದ್ದರಂತೆ. ಸಾಯುವ ಸಮ ಯದಲ್ಲಿ ಗಂಗಾಜಲ ಕುಡಿಸುವ ಪದ್ಧತಿ ದಕ್ಷಿಣಭಾರತದಲ್ಲೂ ಪ್ರಚಲಿತವಿತ್ತು. ವಿಜಯ ನಗರದ ರಾಜ ಕೃಷ್ಣದೇವರಾಯನು ೧೫೨೫ರಲ್ಲಿ ಮೃತಪ್ರಾಯರಾಗಿರುವಾಗ ಅವನಿಗೆ ಗಂಗೋ ದಕ ಕೊಟ್ಟದ್ದರಿಂದ ನಿರೋಗಿ ಆಗಿದ್ದಾನೆಂದಿವೆ. (ವಿಜಯನಗರ ಥರ್ಡ್ ಡಾಯ್‌ನೆಸ್ಟಿ ೧೯೩೫) ಭೂಟಾನದ ಯುದ್ಧ ಅಂತ್ಯವಾದಾಗ ತಿಬ್ಬತಿನ ತೂಶೀಲಾಮಾನೆಯೆಂಬವನು ಭಾರತದ ವೈಸ್ ರಾಯನಾಗಿದ್ದ ವಾರೆನ್ ಹೇಸ್ಟಿಂಗ್ಸ್‌ನ ಬಳಿಗೆ ಒಬ್ಬ ದೂತನನ್ನು ಕಳುಹಿಸಿ ಗಂಗಾ ತಟದ ಹತ್ತಿರ ಸ್ವಲ್ಪ ಸ್ಥಳ ಕೊಡಬೇಕೆಂದು ಕೇಳಿಕೊಂಡಂತೆ ಸಿಕ್ಕಿದ ಸ್ಥಳದಲ್ಲಿ ಒಂದು ಮಂದಿರ ವನ್ನೂ ಮತ್ತೊಂದು ಮಠವನ್ನೂ ಕಟ್ಟಿಸಿದನು. ಯಾಕೆಂದರೆ—ಗಂಗಾನದಿಯು ಕೇವಲ ಹಿಂದುಗಳಿಗೆ ಮಾತ್ರವೇ ಪವಿತ್ರವಲ್ಲ; ಬೌದ್ಧರಿಗೂ ಅಷ್ಟೇ ಪವಿತ್ರವೆಂಬುದನ್ನು ಕಾರ್ಯತಃ ಮಾಡಿ ತೋರಿಸಿದ್ದಾನೆ. ಆ ಸ್ಥಳವು "ಭೋಟ ಭಾಗಾನ್" ಹೆಸರಿಂದ ಪ್ರಸಿದ್ಧವಾಗಿತ್ತು. ಕಡೆಗೆ ಅದನ್ನು ತುಶೀಲಾಮಾನನು ಶ್ರೀ ಪೂರ್ಣಗಿರಿಯೆಂಬವರಿಗೆ ದಾನ ಮಾಡಿದ್ದಾನೆ. ಶ್ರೀ ಲುಡ್‌ವಿಗನು ಮಿಶ್ರದೇಶದ ನೀಲ ನದಿಯ ಇತಿಹಾಸ ಬರೆದಂತೆ ಗಂಗಾನದಿಯ ಇತಿಹಾಸ ಬರೆದರೆ ಅದೆಷ್ಟು ರೋಚಕವಾಗಬಹುದೆಂಬುದು ವಿಚಾರಣೀಯ ವಿಷಯ!

ಸ್ವಾಸ್ಥ್ಯದ ದೃಷ್ಟಿಯಿಂದ ಗಂಗಾಜಲವನ್ನು ಹಿಂದುಗಳ ಹೊರತು ಅನ್ಯ ಮತ ದವರು ಕೂಡಾ ಉಪಯೋಗಿಸುತ್ತಿದ್ದರೆಂಬುದನ್ನು ನಾವು ತಿಳಿದಿರುವೆವು. ಇಲ್ಲಿ ಗಂಗಾ ಮತ್ತು ಯಮುನಾ ಇವೆರಡೂ ನದಿಗಳ ಜಲವನ್ನು ಪರೀಕ್ಷಿಸಿ ಯಾವುದು ಉತ್ತಮವೆಂಬು ದನ್ನು ಕೂಡಾ ನಿರ್ಧರಿಸಿದ್ದಾರೆ. ವಿಜ್ಞಾನಾಚಾರ್ಯನಾದ ಶ್ರೀ ಹೈನ್‌ಬರಿ ಹೈಂಕಿನ್ ಎಂಬವನು ಒಂದು ಸಮಯ ಯುಕ್ತಪ್ರಾಂತ್ಯ ಮತ್ತು ಮಧ್ಯಪ್ರದೇಶ ಸರಕಾರದ ಕಡೆಯಿಂದ ರಸಾಯನ-ಪರೀಕ್ಷಕನಾಗಿದ್ದನು. ಅವನು "ಪಾಸ್‌ಚರ ಇನ್‌ಸ್ಟಿಟ್ಯೂಟ್"ಯೆಂಬ ಫ್ರಾಂಸಿನ ಪತ್ರಿಕೆಯಲ್ಲಿ ಸನ್ ೧೮೯೬ರಲ್ಲಿ ಒಂದು ಲೇಖನ ಬರೆದಿದ್ದನು. ಅದರ ಇಂಗ್ಲಿಷ್ ಅನುವಾ ದವು ರಾಂಚಿಯಿಂದ ಹೊರಡುತ್ತಿದ್ದ "ಮ್ಯೆನ್ ಇನ್ ಇಂಡಿಯಾ" ಹೆಸರಿನ ತ್ರೈಮಾಸಿಕ ಪತ್ರದ ಸಂಪುಟ ೧೮, ಅಂಕೆ ೨-೩ (ಎಪ್ರಿಲ್-ಸೆಪ್ಟಂಬರ, ೧೯೩೮)ರಲ್ಲಿ ಪ್ರಕಾಶನವಾಗಿದೆ. ಅದರ ಸಾರಾಂಶ ಹೀಗಿದೆ—ಶ್ರೀ ಗಂಗಾ ಮತ್ತು ಯಮುನೆಯು ಹಿಂದುಗಳಿಗೆ ಅದೆಷ್ಟು ಪವಿತ್ರ ವಾಗಿದೆ-ಯೆಂಬುದು ಸರ್ವರೂ ತಿಳಿದ ವಿಷಯ. ವಿದೇಶಿಗಳಿಗೆ ಮತ್ತು ಇಂಗ್ಲಿಷ್ ಶಿಕ್ಷಾ ಪ್ರಾಪ್ತಿ ಮಾಡಿರುವ ಹಿಂದುಗಳಿಗೆ ಮಾತ್ರ ಅದರಲ್ಲಿರುವ ಶ್ರದ್ಧೆ-ಅವಿವೇಕಪೂರ್ಣವೆಂದು ತೋರುತ್ತದೆ. ಯಾಕಂದರೆ ದೊಡ್ಡ ದೊಡ್ಡ ನಗರಗಳ ಸಮೀಪದಲ್ಲಿರುವ ಆ ನದಿಗಳಲ್ಲಿ ಎಷ್ಟೋ ರೋಗಿಗಳು ಸ್ನಾನ ಮಾಡುತ್ತಾರಲ್ಲದೆ, ಆ ನಗರದಲ್ಲಿರುವ ಗಟರಗಳ ಹಾಳಾದ ಕೊಳಕು ನೀರು ನದಿಗೆ ಬೀಳುವುದರಿಂದಲೂ, ಸತ್ತ ಪಶುಗಳನ್ನೇ ಅಲ್ಲಾ; ಸತ್ತುಹೋದ ಮನುಷ್ಯರ ಶವವನ್ನು ಕೂಡಾ ನದಿಗಳಿಗೆ ಹಾಕಿಬಿಡುತ್ತಾರೆ. ಇದನ್ನೆಲ್ಲಾ ನೋಡಿದವರಿಗೆ ಆ ನದಿಗಳ ಜಲವನ್ನು ಕುಡಿಯುವುದೆಂದರೆ ರೋಗಗಳಿಗೆ ಆಮಂತ್ರಣ ಕೊಟ್ಟಂತೆಯೇ ಸರಿ

ಯೆಂದು ನಂಬುತ್ತಾರೆ. ಅಂತಹ ಪರಿಸ್ಥಿತಿಯಲ್ಲೂ ಅದರ ಮೇಲಿರುವ ಹಿಂದುಗಳ ಶ್ರದ್ಧಾ ಭಕ್ತಿಗಳನ್ನು ಕಂಡು ಶುದ್ಧತಾವಾದಿಗಳಿಗೆ ಅದು ಅಜ್ಞಾನದ ಪ್ರಮಾಣವೆಂದು ತೋರುತ್ತದೆ. ವಿದೇಶಿಗಳು ಹೆಚ್ಚಾಗಿ ವಿಷೂಚಿಕಾ (cholera) ರೋಗಗಳಿಗೆ ಮುಖ್ಯ ಕಾರಣವೇ ಆ ನದಿಗಳೆಂದೂ; ಆ ನದಿಯ ಜಲದ ಮೂಲಕ ಆ ರೋಗದ ಕೀಟಾಣುಗಳು ಪ್ರಸಾರವಾಗುತ್ತದೆಂದು ತಿಳಿದಿದ್ದರು. ಆದರೆ ವೈಜ್ಞಾನಿಕರು ಮಾಡಿದ ಅನ್ವೇಷಣೆಯಿಂದಾಗಿ ಅನ್ಯ ನದಿಗಳ ಜಲದಿಂದ ಗಂಗಾ ಮತ್ತು ಯಮುನಾ ನದಿಗಳ ಜಲವು ಶುದ್ಧವಾಗಿರುತ್ತದೆಂದು ಸ್ಪಷ್ಟವಾಗಿದೆ.

ಅಣುವೀಕ್ಷಣ ಯಂತ್ರ ಮೂಲಕ ಸಾಧಾರಣ ಪರೀಕ್ಷೆಯಿಂದಲೇ ಭಾರತದ ಆವೆರಡೂ ನದಿಗಳ ಜಲವು ಯೂರೋಪಿನ ನದಿಗಳ ಜಲಕ್ಕಿಂತ ಬಹಳ ಅಂತರವಿದೆಯೆಂದು ತಿಳಿಯಲಾಗಿದೆ. ಅಲ್ಲಿಯ ನದಿಗಳಲ್ಲಿ ಕೊಳೆತು ಹೋದ ಮತ್ತು ಹಸುರು ಬಣ್ಣದ ಹುಲ್ಲುಗಳನ್ನು ಕಾಣಬಹುದು, ಆದರೆ ಗಂಗಾ ಯಮುನಾ ನದಿಗಳ ಜಲದಲ್ಲಿ ಅದು ಬಹಳ ಕಡಿಮೆಯೆಂದೇ ಹೇಳಬಹುದು. ಒಂದು ವೇಳೆ ಇದ್ದರೂ ಘಾಟಿಗಳ ಹತ್ತಿರ ಮತ್ತು ದೊಡ್ಡ ನಗರಗಳ ಮುಂದಿನ ಭಾಗದ ಜಲದಲ್ಲಿರುತ್ತದಷ್ಟೆ ! ೧೯೪೪ರಲ್ಲಿ "ಇಂಡಿಯನ್ ಮೆಡಿಕಲ್ ಕಾಂಗ್ರೇಸ್" ಆಗಿತ್ತು. ಅದರಲ್ಲಿ ಓದಿದ "ಆನ್ ದಿ ಮಾಯಿಕ್ರೋಬ್ಸ್ ಆಫ್ ಇಂಡಿಯನ್ ರಿವರ್ಸ್" (ಭಾರತೀಯ ನದಿಗಳ ಕೀಟಾಣು) ಯೆಂಬ ತಲೆಕಟ್ಟಿನ ಲೇಖನದಲ್ಲಿ ಗಂಗಾ ಯಮುನಾ ನದಿಗಳ ಜಲದಲ್ಲಿ ಬೆಳೆಯುವ ಹುಲ್ಲು ಹಾಗೂ ಜಂತುಗಳು ಬಹಳ ಕಡಿಮೆಯಾಗಿ ಕಾಣಲ್ಪಡುತ್ತದೆಂದಿದೆ. ಸೂಕ್ಷ್ಮವಾಗಿ ಮಾಡಿದ ಪರೀಕ್ಷೆಯಲ್ಲಿ ಕೀಟಾಣುಗಳಿಂದ ಅದರ ಜಲವು ಬಹಳ ಶುದ್ಧವಾಗಿರುತ್ತದೆಂದು ತಿಳಿಯಲಾಗಿದೆ. ಇಂಗ್ಲೆಂಡಿನ ಹಾಗೆ ಇಲ್ಲಿಯ ನದಿಗಳಿಗೆ ಕೊಳೆತ ದುರ್ಗಂಧಯುಕ್ತ ಗಟರಗಳ ನೀರು ಬೀಳುವುದಿಲ್ಲ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಇತ್ತೀಚೆಗೆ ಕೊಳಕು ನೀರು ನದಿಗಳಿಗೆ ಹೋಗುವ ವ್ಯವಸ್ಥೆ ಮಾಡಲಾಗಿದೆ. ಹಾಗಿದ್ದರೂ ಅದು ಯೂರೋಪ್ ದೇಶಗಳಿಗಿಂತ ಭಾರತದಲ್ಲಿ ಅತೀ ಅಲ್ಪವೆಂದೇ ಹೇಳಬಹುದು. ನದಿಗಳ ತೀರದಲ್ಲಿ ಹೊರಗಿನ ದೇಶಗಳಲ್ಲಿದ್ದಷ್ಟು ಕಾರಖಾನೆಗಳು ಇಲ್ಲಿಲ್ಲ. ಅಲ್ಲಿಯ ಕಾರಖಾನೆಗಳಿಂದ ರಾಸಾಯನಿಕ ಪದಾರ್ಥಗಳು ನೀರಿನೊಂದಿಗೆ ಬಂದು ನದಿಗಳಲ್ಲಿ ಸಮ್ಮಿಳಿತವಾಗಿ ಆದರ ನೀರನ್ನು ಕೆಡಿಸುವಂತೆ ಭಾರತದಲ್ಲಿ ಆಗುವುದಿಲ್ಲ. ಇಲ್ಲಿಯ ನದಿಗಳ ನೀರು ಹಾಳಾಗದಿರುವುದಕ್ಕೆ ಇನ್ನೊಂದು ಕಾರಣವೇನೆಂದರೆ ಇಲ್ಲಿ ನದಿಗಳ ಎರಡೂ ತಟಗಳಲ್ಲಿ ಒಂದು-ಒಂದೂವರೆ ಮೈಲು ವಿಸ್ತೀರ್ಣದ ಬಂಜರು ಭೂಮಿ ಇರುತ್ತದೆ. ಅದರಲ್ಲಿ ಎತ್ತರವಾದ ಗೋಡೆಗಳಂತಿರುವ ಘಾಟಿಗಳಿರುವುದರಿಂದ ಅಲ್ಲಿ ಜನಸಂಖ್ಯೆ ಬಹಳ ಕಡಿಮೆ ಇರುತ್ತದೆ. ಆಗ್ರಾದಿಂದ ೧೨ ಮೈಲುಗಳಷ್ಟು ಕೆಳಗಿನ ವರೇಗೆ ಯಮುನಾ ತಟವಲ್ಲಿ ಕೇವಲ ಎರಡು–ಮೂರು ಊರುಗಳವೆಯಷ್ಟೆ. ಅದಕ್ಕಿಂತ ಮೇಲಿನ ಭಾಗದಲ್ಲಿ ಸಾಧಾರಣ ೧೩ ಮೈಲುಗಳಷ್ಟು ದೂರಕ್ಕೆ ಐದು ಊರುಗಳಿವೆ. ಪ್ರತಿಯೊಂದು ಊರಿನಲ್ಲೂ ವಾಸಿಸುವ ಜನಸಂಖ್ಯೆ ೮೦೦–೧೦೦೦ಕ್ಕಿಂತ ಹೆಚ್ಚಿಗಿಲ್ಲ. ನಗರಗಳ ಕೊಳೆತ ನೀರು ಅದಕ್ಕೆ ಕೂಡಿದರೂ ಎರಡೂ ತಟಗಳ ಬಂಜರು ಭೂಮಿ ಆ ಕೊಳಕನ್ನು ಹೀರಿಕೊಳ್ಳುವುದರಿಂದಲೂ, ನದಿಯ ತಳಗಡೆಯಲ್ಲಿ ಹೆಚ್ಚಾಗಿ ಹೊಯಿಗೆ ಇದ್ದು ಅದರ ಮೇಲೆ ನೀರು ಹರಿಯುತ್ತಿರುವುದರಿಂದಲೂ, ಬಯಲು ಪ್ರದೇಶವಾಗಿರುವ ಕಾರಣ ಹೆಚ್ಚಾಗಿ ಸೂರ್ಯನ ಬಿಸಿಲು ಬೀಳುವುದರಿಂದಲೂ,

ಅದರ ನೀರು ಶುದ್ಧವಾಗುತ್ತಾ ಇರುತ್ತದೆ. ಯೂರೋಪಿನ ನದಿಗಳಿಗೆ ಕೇವಲ ಮಳೆಯ ನೀರು ಮಾತ್ರ ಸಿಕ್ಕುತ್ತದೆ. ಆದರೆ ನಮ್ಮ ದೇಶದ ನದಿಗಳಿಗೆ ಹೆಚ್ಚಾಗಿ ನೀರು ಹಿಮಾಲಯದ ಕಡೆಯಿಂದ ನಿರಂತರ ಬರುತ್ತಿರುವುದರಿಂದ ಅದು ಸ್ವಾಭಾವಿಕವಾಗಿ ಶುದ್ಧವಾಗಿರುತ್ತದೆ.

ಬೇಸಿಗೆ ಸಮಯದಲ್ಲಿ ಆಗ್ರದಿಂದ ಐದು (೫) ಮೈಲು ಮೇಲಿನ ಯಮುನಾ ನದಿಯ ಜಲದ ಒಂದು ಘನ ಸೆಂಟಿಮೀಟರಿನಲ್ಲಿ ೭೫–೭೬ ಕೀಟಾಣುಗಳನ್ನು ನೋಡಲಾಗಿದೆ. ಆಗ್ರದಿಂದ ಸ್ವಲ್ಪ ಮೇಲ್ಗಡೆಯ ನೀರಿನಲ್ಲಿ ಆದರ ಸಂಖ್ಯೆ ೭೦೦–೭೫೦ ವರೇಗೆ ಕಾಣಲಾಗಿದೆ. ನಗರದ ಕೆಳಭಾಗದಲ್ಲಿ ಆದರ ಸಂಖ್ಯೆ ಹೆಚ್ಚಾಗಿ ೨೫೦೦೦ ವರೇಗೆ ಮುಟ್ಟಿದೆ. ಆದರೆ ಅಲ್ಲಿಂದ ಕೆಳಗಡೆ ಹನ್ನೆರಡುವರೆ ಮೈಲು ದೂರದಲ್ಲಿ ಆದರ ಸಂಖ್ಯೆ ಕಡಿಮೆಯಾಗಿ ೧೫೦ ರಿಂದ ೮೦ರ ತನಕ ಉಳಿದಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ಇಲ್ಲಿಯ ನದಿ ಜಲದಲ್ಲಿ ಶುದ್ಧ ಮಾಡುವ ಸ್ವತಃ ಶಕ್ತಿ ಇರುತ್ತದೆ. ಅಂಟುರೋಗವೆನಿಸುವ ವಾಂತಿಭೇದಿಯ ಸಮ್ಮಂಧವಾಗಿ ಜನರ ಅಭಿಪ್ರಾಯ ಹೀಗಿದೆ-ಅದು ಬಂಗಾಲಕ್ಕಿಂತ ಮೇಲ್ಭಾಗದಲ್ಲಿ ಹರಡುವುದಲ್ಲದೆ, ಅಲ್ಲಿಂದ ಕೆಳಗಡೆಯಲ್ಲಿ ಆ ರೋಗವು ಹರಡುವುದಿಲ್ಲ. ಒಂದು ವೇಳೆ ನದಿಯ ಕೊಳಕು ನೀರಿನ ದೆಸೆಯಿಂದ ಆದು ಹರಡುವುದಾದರೆ ಕೆಳಭಾಗದಲ್ಲೂ ಹರಡಬೇಕಿತ್ತು. ಇಲ್ಲಿಯ ನದಿಗಳ ತಟದಲ್ಲಿ ಯಾವುದಾದರೊಂದು ಜಾತ್ರೆ ಅಥವಾ ಯಾತ್ರಿಕರ ದೆಸೆಯಿಂದ ಆ ರೋಗ ಹರಡುತ್ತದೆಂದು ಹೇಳುವುದಾದರೆ, ಅದು ಕೆಳಗಡೆಯ ಊರುಗಳಲ್ಲಿ ಯಾಕೆ ಹರಡುವುದಿಲ್ಲ? ರೋಗದ ಕೀಟಾಣುಗಳು ನೀರಿನ ಮೂಲಕ ಅಲ್ಲಿವರೆಗೆ ತಲ್ಪುವುದಿಲ್ಲವೆಂದು ಹೇಳಲಾಗುವುದಿಲ್ಲ. ಹೆಚ್ಚಾಗಿ ಹಿಂದುಗಳು ಆ ನದಿಯ ತೀರಗಳಲ್ಲಿ ಮಲ ಮೂತ್ರ ವಿಸರ್ಜನೆ ಮಾಡುವುದಿಲ್ಲವಾದರೂ ವಸ್ತ್ರ ಒಗೆಯುವುದರಿಂದ ಮತ್ತು ಸ್ನಾನ ಮಾಡುವುದರಿಂದ ಕೀಟಾಣುಗಳು ಪ್ರವೇಶವಾಗಲು ಸಾಧ್ಯವಿದೆ. ಎಲ್ಲಕ್ಕಿಂತ ವಿಶೇಷದ ಮಾತೆಂದರೆ ಆ ರೋಗದಿಂದ ಮೃತಪಟ್ಟವರ ಶವಗಳನ್ನು ನದಿಯಲ್ಲಿ ಪ್ರವಾಹಿಸಿ ಬಿಡುತ್ತಾರೆ. ಆದ್ದರಿಂದ ಗಂಗಾ ಮತ್ತು ಯಮುನಾ ನದಿಯ ಜಲವನ್ನು ರಾಸಾಯನಿಕ ಪರೀಕ್ಷೆ ಮಾಡಿದಾಗ ಅದರ ಜಲದಲ್ಲಿ ಆ ರೋಗಗಳ ಕೀಟಾಣುಗಳನ್ನು ನಷ್ಟಗೊಳಿಸುವ ಶಕ್ತಿಯಿದೆಯೆಂದು ತಿಳಿದು ಬಂದಿದೆ. ಪ್ರಥಮ ಪರೀಕ್ಷೆಯಲ್ಲಿ ನದಿಯ ಜಲವನ್ನು ಅರ್ಧ ಘಂಟೆ ತನಕ ಬಿಸಿಮಾಡಿ ಆ ಮೇಲೆ ಗಂಗಾ, ಯಮುನಾ ಮತ್ತು ಆಗ್ರದ ಹತ್ತಿರದ ಜಲವನ್ನೂ ಸಮ ಪಾಲಾಗಿ ತೆಗೆದು ಬೇರೆ ಬೇರೆ ಬಾಟ್ಲಿಗಳಲ್ಲಿ ತುಂಬಿಸಿ ಅದರಲ್ಲಿ ರೋಗದ ಕೀಟಾಣುಗಳನ್ನು ಬಿಡಲಾಯಿತು. ಆದರ ಪರಿಣಾಮ ಹೀಗಾಗಿದೆ–ಯುಮುನಾ ನದಿಯ ಜಲದಲ್ಲಿ ೧೨೫೮೦ ಕೀಟಾಣುಗಳು ೪೮ ಘಂಟೆಗಳಲ್ಲಿ ೫೦೦೦ವೇ ಉಳಿದಿತ್ತು. ಆಗ್ರದ ಹತ್ತಿರದ ಜಲದಲ್ಲಿ ೧೪೦೦೦ ಕೀಟಾಣುಗಳು ಅಷ್ಟೇ ಸಮಯದಲ್ಲಿ ೧೫೦೦೦ ಆಗಿತ್ತು. ಆ ಮೇಲೆ ಗಂಗಾನದಿಯ ಜಲದಲ್ಲಿ ೧೦೦೦೦ ಕೀಟಾಣುಗಳ ಸ್ಥಾನದಲ್ಲಿ ೧೧೦೦೦ ಆಗಿತ್ತು. ಅನಂತರ ಗಂಗಾಜಲ ಮತ್ತು ಬಾವಿಯ ಜಲವನ್ನು ಬಿಸಿಮಾಡದೆ ಸರಿಯಾಗಿ ಗಾಳಿಸಿ ಪರೀಕ್ಷೆ ಮಾಡಲಾಯಿತು. ಆದರ ಪರಿಣಾಮವನ್ನು ಹೇಳುವುದಾದರೆ ಗಂಗಾಜಲದಲ್ಲಿ ೫೫೦೦ ಕೀಟಾಣುಗಳು ಮೂರು ಘಂಟೆಗಳಲ್ಲಿ ಸಂಪೂರ್ಣ ನಾಶವಾಗಿವೆ. ಬಾವಿಯ ಜಲದಲ್ಲಿ ೮೫೦೦ ಕೀಟಾಣುಗಳ ಸ್ಥಾನದಲ್ಲಿ ೪೮ ಘಂಟೆಗಳೊಳಗೆ ೧೫೦೦೦ ಆಗಿರುವುದು. ಇದರ ಪರಿಣಾಮದ ಮಟ್ಟಿಗೆ ಹೇಳುವುದಾದರೆ

ಗಂಗಾಜಲವನ್ನು ಬಿಸಿ ಮಾಡುವುದರಿಂದ ಕೀಟಾಣುಗಳನ್ನು ನಾಶ ಮಾಡುವ ಆದರ ಶಕ್ತಿ ಕಡಿಮೆಯಾಗುತ್ತದೆ. ಆದ್ದರಿಂದ ಗಂಗಾ ಜಲವನ್ನು ಎಂದಿಗೂ ಬಿಸಿಮಾಡಬಾರದೆಂದು ಸಾರಿದ್ದಾರೆ.

ಯಮುನಾ ನದಿಯ ಜಲದಲ್ಲಿ ಕೂಡಾ ಎರಡು ಘಂಟೆಗಳೊಳಗೆ ೪೭೦೦ ಕೀಟಾಣುಗಳು ಸಂಪೂರ್ಣ ನಾಶವಾಗಿವೆ. ಇದರ ಹೊರತಾಗಿ ಜಲವನ್ನು ಟ್ಯೂಬುಗಳಲ್ಲಿ ತುಂಬಿಸಿ ಆದರ ಬಾಯಿಯನ್ನು ಚೆನ್ನಾಗಿ ಮುಚ್ಚಿ ಬಿಸಿ ಮಾಡುವುದರಿಂದ ಜಲದಲ್ಲಿರುವ ಕ್ರಿಮಿನಾಶಕ ಶಕ್ತಿಯು ನಷ್ಟವಾಗುವುದಿಲ್ಲವೆಂಬುದು ಕೂಡಾ ತಿಳಿಯಲಾಗಿದೆ. ವರ್ಷಾ ಋತುವನ್ನುಳಿದು ಮಿಕ್ಕುಳಿದ ಎಲ್ಲಾ ಋತುಗಳಲ್ಲೂ ಆದರ ಜಲವನ್ನು ಪರೀಕ್ಷೆ ಮಾಡಿದಾಗ ಇದೇ ಪರಿಣಾಮ ತಿಳಿಯಬಂದಿವೆ. ಬೇಸಿಗೆ ಕಾಲದಲ್ಲಿ ಯಮುನಾ ನದಿಯ ನೀರು ಪ್ರಾಯಃ ಧಿಲ್ಲಿಯ ಹತ್ತಿರ ಬಂದು ಒಟ್ಟಾಗುತ್ತದೆ. ನೀರು ಕೆಳಗೆ ಹೋಗದಂತೆ ಮಾಡಿರುವ ದಂಡೆಯ ಬಾಗಿಲು ಸಹ ಮುಚ್ಚಿರುತ್ತದೆ. ಆಗ ಕೂಡಾ ಆದನ್ನು ಪರೀಕ್ಷಿಸಿದಾಗ ಆದರ ಕೀಟಾಣುನಾಶಕ ಶಕ್ತಿ ಸರ್ವಥಾ ನಷ್ಟವಾಗಿರಲಿಲ್ಲ. ಇದರಿಂದ ತಿಳಿಯಬರುವುದೇನೆಂದರೆ ಹಿಮಾಲಯದಲ್ಲಿರುವ ಮಂಜುಗಡ್ಡೆಗಳು ಕರಗಿ ನೀರಾಗಿ ಬರುವ ಜಲದಲ್ಲಿರುವ ಶಕ್ತಿಯು ಹಲವು ಸಮಯದ ನಂತರವೂ ಅದರಲ್ಲಿ ಇದ್ದಿರುತ್ತದೆ. ನದಿಯ ಪ್ರವಾಹದಿಂದ ಆದರ ಪ್ರಭಾವವು ಹೆಚ್ಚಾಗುವುದಲ್ಲದೆ ಕಡಿಮೆಯಾಗುವುದಿಲ್ಲ. ಆಗ್ರದ ಮೇಲ್ಭಾಗದ ಮತ್ತು ಅದರ ಕೆಳಗಡೆಯ ಹಾಗೂ ಹೆಣಗಳನ್ನು ಬಿಸಾಡಿದ ಸ್ಥಳದ ಜಲವನ್ನು ಕೂಡಾ ತೆಗೆದು ಪರೀಕ್ಷೆ ಮಾಡಲಾಗಿದೆ ಆಗ್ರದ ಮೇಲಿನ ಯಮುನಾ ಜಲದಲ್ಲಿ ೧೨೦೦ ಕೀಟಾಣುಗಳು ಒಂದು ಘಂಟೆಯೊಳಗೆ ೨೦೦ ಮಾತ್ರ ಉಳಿದಿತ್ತು; ಎರಡು ಘಂಟೆಯಲ್ಲಿ ಆದು ಸಂಪೂರ್ಣ ನಾಶವಾಗಿವೆ. ಆದರ ಕೆಳಗಡೆಯ ಜಲದಲ್ಲಿ ೧೫೦೦ ಕೀಟಾಣುಗಳು ಒಂದು ಘಂಟೆಯೊಳಗಾಗಿಯೇ ನಾಶವಾಗಿರುವುದು. ನದಿಯಲ್ಲಿದ್ದ ಒಂದು ಹೆಣದ ಹತ್ತಿರದ ಜಲವನ್ನು ತೆಗೆದು ಪರೀಕ್ಷೆ ಮಾಡಿದಾಗ ೧೫೦೦ ಕೀಟಾಣುಗಳು ಒಂದು ಘಂಟೆಯೊಳಗೆ ೫೦ ಮಾತ್ರ ಉಳಿದಿತ್ತು. ಮತ್ತೊಂದು ಘಂಟೆಯೊಳಗೆ ಸಂಪೂರ್ಣ ನಾಶವಾಗಿವೆ. ಆದರೆ ಬಾವಿಯ ಜಲವನ್ನು ಬಿಸಿಮಾಡಿ ನೋಡಿದಾಗ ೧೨೦೦ ಕೀಟಾಣುಗಳು ವೃದ್ಧಿ ಆಗುತ್ತಾ ಆಗುತ್ತಾ ೨೧ ಘಂಟೆಗಳಲ್ಲಿ ೩೦೦೦ ಆಗಿವೆ; ೪೫ ಘಂಟೆಗಳಲ್ಲಿ ೧೬೦೦೦ ವರೇಗೆ ವೃದ್ಧಿಯಾಗಿರುವುದು. ಇವೆಲ್ಲಾ ಪರೀಕ್ಷೆಗಳಿಂದ ತಿಳಿದುಬರುವುದೇನೆಂದರೆ, ಗಂಗಾ ಮತ್ತು ಯಮುನಾ ನದಿಯ ಜಲಕ್ಕೆ ಎಷ್ಟೋ ಹಾಳಾದ ಕೊಳಕು ನೀರು ಬಂದು ಸೇರಿದರೂ ಆ ಜಲದಲ್ಲಿರುವ ಕ್ರಿಮಿನಾಶಕ ಶಕ್ತಿಯು ನಷ್ಟವಾಗುವುದಿಲ್ಲ. ಆದ್ದರಿಂದ ಆ ನದಿಗಳ ಜಲದ ಶಕ್ತಿಯ ಪರವಾಗಿ ಆಲೋಚಿಸುವುದಾದರೆ ತೀರ್ಥಗಳ ಹೆಸರಿನಿಂದ ಬರುವ ಯಾತ್ರಿಕರ ಸಮುದಾಯಗಳಲ್ಲಿ ಒಂದು ವೇಳೆ ಅಂತಹ ವಿಷೂಚಿಕ ರೋಗಗಳು ಹರಡಿಹೋದರೆ ಆಗ ಬಾವಿಗಳ ನೀರನ್ನೆಂದಿಗೂ ಕುಡಿಯಬಾರದು. ಕುಡಿಯಲಿಕ್ಕೆ ಮತ್ತು ಅಡಿಗೆ, ಸ್ನಾನ ಇತ್ಯಾದಿ ಎಲ್ಲಾ ವ್ಯವಹಾರಗಳಿಗೂ ಗಂಗಾ ಮತ್ತು ಯಮುನಾ ನದಿಯ ಜಲವನ್ನೇ ಉಪಯೋಗಿಸಬೇಕೆಂದು ಆಜ್ಞೆ ಹೊರಡಿಸಿದ್ದಾರೆ. ಆದ್ದರಿಂದ ಆವೆರಡೂ ನದಿಗಳ ಜಲವು ಆದಿಯಿಂದ ಈ ವರೆಗೂ ಅತ್ಯಂತ ಪವಿತ್ರವಾಗಿದ್ದಂತೆ ಮುಂದಕ್ಕೂ ಅದು ಪವಿತ್ರವೇ ಆಗಿರುವುದೆಂಬುದಕ್ಕೇನೂ ಸಂದೇಹವಿಲ್ಲ !

---

# ಶ್ರೀಕೃಷ್ಣ ಯಶೋಗಾನ

❁ ಕೆ. ವಿ. ಶೇಷಾಚಲಪತಿ, ಬಿ. ಎ.

ಇದೇ ಶ್ರಾವಣ ಮಾಸದ ಅಷ್ಟಮಿಯಂದು ನಾಡಿನಾದ್ಯಂತ ಶ್ರೀ ಕೃಷ್ಣ ಜಯಂತಿಯನ್ನು ಆಚರಿಸಲಾಗುತ್ತಿದೆ. ಗೋಕುಲಾಷ್ಟಮಿ ಎಂದು ಕರೆಯಲಾಗುವ ಈ ಉತ್ಸವ ಎಲ್ಲಾ ಹಿಂದೂ ಬಾಂಧವರಿಗೆ ಆತ್ಮೀಯವಾದ ಹಬ್ಬಗಳಲ್ಲೊಂದು. ದೇವಾಲಯಗಳಲ್ಲಿ, ಮನೆಗಳಲ್ಲಿ ವಿಶೇಷ ಪೂಜೆ, ವಿಶೇಷ ಭಕ್ಷ್ಯಭೋಜ್ಯಗಳು ನಡೆಯುತ್ತವೆ. ಆದರೆ ಇವೆಲ್ಲಾ ಶ್ರೀಕೃಷ್ಣ ಜನ್ಮಾಷ್ಟಮಿಯ ಹೊರನೋಟ ಮಾತ್ರ. ಇದರ ಅಂತರ್ಯವನ್ನು ಬಗೆದು ನೋಡ ಬಯಸುವವರ ಸಂಖ್ಯೆ ಲಕ್ಷಕ್ಕೊಂದು ಸಿಕ್ಕುವುದೂ ಕಠಿಣವೇ. ಶ್ರೀಕೃಷ್ಣ ಆಬಾಲ ವೃದ್ಧರಿಗೆಲ್ಲಾ ಅತ್ಯಂತ ಪ್ರಿಯನಾದ ವ್ಯಕ್ತಿ. ಶ್ರೀರಾಮನು ಭಾರತೀಯರಾದ ನಮಗೆಲ್ಲರಿಗೂ ಹೆಚ್ಚು ಪೂಜ್ಯನಾದರೆ, ಶ್ರೀಕೃಷ್ಣನು ಹೆಚ್ಚು ಪ್ರಿಯ. ಇದಕ್ಕೆ ಕಾರಣ ಆತ ಪ್ರತಿಯೊಂದನ್ನೂ ಮಾನವಿಕಸ್ತರದಲ್ಲೇ ತೂಗಿನೋಡುವನು. ಮನುಷ್ಯನ ದೌರ್ಬಲ್ಯಗಳು, ಅವುಗಳಿಂದ ಹೊರಬರಲಿಚ್ಛಿಸುವ ಧೀರ ವ್ಯಕ್ತಿತ್ವ, ಮಹತ್ಕಾರ್ಯಸಾಧನೆಗಾಗಿ ಅಲ್ಪಜ್ಞನೂ, ಅಲ್ಪಶಕ್ತನೂ ಆದ ಮಾನವನು ಹೇಗೆ ಕಟಿಬದ್ಧನಾಗಿ ನಿಲ್ಲಬಲ್ಲನೆಂಬ ಚಿತ್ರಣ, ತನ್ನ ಇತಿಮಿತಿಗಳ ಹೊರತಾಗಿಯೂ ಹೇಗೆ ಲೋಕಕ್ಕೆ ಉಪಕಾರ ಮಾಡಿ ಲೋಕದ ಜನರನ್ನು ಮಹತ್ತಿನ ಕಡೆಗೆ ಮುನ್ನಡೆಸಬಹುದು—ಇತ್ಯಾದಿ ವಿಷಯಗಳನ್ನೆಲ್ಲಾ ಶ್ರೀಕೃಷ್ಣನ ವ್ಯಕ್ತಿತ್ವ ಪದರುಗಳಲ್ಲಿ ಕಾಣಬಹುದಾಗಿದೆ.

ಒಮ್ಮೆ ಪ್ರಚಂಡ ಪರಾಕ್ರಮಿಯಾಗಿ ಕಂಡರೆ, ಇನ್ನೊಮ್ಮೆ ದೀನ-ದಲಿತರ ಆಶಾಕಿರಣ. ಒಮ್ಮೆ ಅನ್ಯಾಯದ ವಿರುದ್ಧ ಕೆರಳಿನಿಂತ ಸಿಂಹನಾದರೆ, ಇನ್ನೊಮ್ಮೆ ವಿನಮ್ರ ಸೇವಾಭಾವದ ಸೇವಾವ್ರತಿ. ಒಮ್ಮೆ ಪ್ರಚಂಡ ಮೇಧಾವಿಯಾದ ರಾಜಕಾರಣ ತಜ್ಞನಾದರೆ ಮತ್ತೊಮ್ಮೆ ಮುಗ್ಧ ಜನರ ಕಣ್ಮಣಿಯಾಗಿ ನಲಿದಾಟ–ಈ ದ್ವಂದ್ವ ಹಾಗೂ ಪೂರಕ ವ್ಯಕ್ತಿತ್ವಗಳನ್ನು ಶ್ರೀಕೃಷ್ಣನಲ್ಲಿ ನಾವು ಕಾಣಬಹುದು. ಕೂಟನೀತಿ ರಾಜಕೀಯದಲ್ಲಿ ಅಗತ್ಯ, ಆದರದು ಸ್ವಾರ್ಥದ ಬೇಲಿಯಿಂದ ಹೊರಗಿರಬೇಕು.–ಎಂದು ಶ್ರೀಕೃಷ್ಣನ ಜೀವಿತ ಘಟನೆಗಳು ಸಾರುತ್ತಿವೆ. ತನ್ನ ಜೀವನದಲ್ಲಿ ನಡೆಸಿದ ಪ್ರಚಂಡ ಹೋರಾಟಗಳಲ್ಲಿ ಪಡೆದ ಅದ್ಭುತ ಯಶಸ್ಸಿನ ಕಾರಣ ಆತನ ಸ್ವಾರ್ಥರಹಿತ ಮನೋಭಾವವೇ ಆಗಿದೆ. ತನ್ನ ಎಲ್ಲಾ ಜೀವಮಾನವನ್ನು ಇತರರ ಹಿತಕ್ಕಾಗಿಯೇ ಸವೆಸಿದ ಶ್ರೀಕೃಷ್ಣನು ತನಗಾಗಿ ಏನನ್ನೂ ಆಶಿಸಲಿಲ್ಲ. ರಾಜನೈತಿಕ ಕ್ಷೇತ್ರದಲ್ಲಿ ವಿಜಯಕ್ಕಾಗಿ ಬಾಯಿ ತೆರೆದುಕೊಂಡು ಕುಳಿತಿರುವ ರಾಜಕಾರಣಿಗಳು ಶ್ರೀಕೃಷ್ಣನ ಅದ್ಭುತವಾದ ಯಶಸ್ಸಿನ ಗುಟ್ಟನ್ನು ಅರಿತಿಲ್ಲ. ಸಮಷ್ಟಿಹಿತದಲ್ಲೇ ವ್ಯಷ್ಟಿಹಿತವೂ ಅಡಕವಾಗಿದೆ–ಎಂಬ ಸರಳ ಸತ್ಯವನ್ನು ನಮ್ಮ ರಾಜಕಾರಣಿಗಳು ಅರಿತರೆಂದಾದರೆ ಅವರು ತಾವೂ ಯಶಸ್ವಿಗಳಾಗಿ ತಮ್ಮ ನಾಡನ್ನು ಬೆಳೆಸಿಯಾರು.

ಯೋಗಿರಾಜ ಶ್ರೀಕೃಷ್ಣನು ತನ್ನ ಕಾಲದಲ್ಲಿ ಎಲ್ಲರಿಗಿಂತ ಅತ್ಯಂತ ಮಹಾನ್ ವ್ಯಕ್ತಿಯಾಗಿದ್ದನು. ಬಾಲ್ಯದಿಂದ ಅಂತ್ಯಕಾಲದ ವರೆಗೆ ಆತನ ಜೀವನ ಒಂದು ಆದರ್ಶಪ್ರಾಯವಾಗಿತ್ತು. ಮಹಾಭಾರತದಲ್ಲಿ ಉದಾತ್ತವಾಗಿ ಚಿತ್ರಿತವಾಗಿರುವ ಶ್ರೀಕೃಷ್ಣನ ಜೀವನವು

ಭಾಗವತದಲ್ಲಿ ಕಳಂಕಪೂರಿತವಾಗಿ ತೋರಿಸಿದೆ. ಶ್ರೀಕೃಷ್ಣನ ವಿಷಯದಲ್ಲಿ ಮಹರ್ಷಿ ದಯಾನಂದರು 'ಸತ್ಯಾರ್ಥ ಪ್ರಕಾಶ'ದಲ್ಲಿ ಈ ರೀತಿ ಬರೆದಿದ್ದಾರೆ:—

"ನೋಡಿರಿ, ಮಹಾಭಾರತದಲ್ಲಿ ಶ್ರೀಕೃಷ್ಣನ ಇತಿಹಾಸ ಅತ್ಯಂತ ಶ್ರೇಷ್ಠವಾದುದಾಗಿವೆ. ಆತನ ಗುಣ, ಕರ್ಮ, ಸ್ವಭಾವ ಮತ್ತು ಚರಿತ್ರೆಗಳು ಆಪ್ತ ಪುರುಷರಿಗೆ ಸದೃಶವಾಗಿದೆ. ಶ್ರೀಕೃಷ್ಣನು ಜನ್ಮದಿಂದ ಮರಣಪರ್ಯಂತ ಯಾವುದೇ ಅಧರ್ಮಾಚರಣೆ ಮಾಡಿರುವುದನ್ನು ಆದರಲ್ಲಿ ಬರೆದಿಲ್ಲ. ಆದರೆ ಈ ಭಾಗವತಕಾರರು ಅನುಚಿತ ದೋಷಗಳನ್ನು ಆತನ ಮೇಲೆ ಆರೋಪಿಸಿದ್ದಾರೆ. ಹಾಲು–ಮೊಸರು–ಬೆಣ್ಣೆಗಳ ಕಳವು, ಕುಬ್ಜೆ ದಾಸಿಯೊಂದಿಗೆ ಸಮಾಗಮ, ಪರಸ್ತ್ರೀಯರೊಂದಿಗೆ ರಾಸಲೀಲೆ ಇತ್ಯಾದಿ ಮಿಥ್ಯಾದೋಷಗಳನ್ನು ಶ್ರೀಕೃಷ್ಣನ ಮೇಲೆ ಹೊರಿಸಿದ್ದಾರೆ."

ಮಹಾಭಾರತದಲ್ಲಿ ಮಹಾತ್ಮನಾದ ಶ್ರೀಕೃಷ್ಣನ ಜೀವನ ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಬಂದಿದೆ. ಆದರೆ ಸಭಾಪರ್ವದಲ್ಲಿ ಶ್ರೀಕೃಷ್ಣನ ಜೀವನದ ಸಂಬಂಧದಲ್ಲಿ ಬಂದಿರುವ ವಿಷಯವನ್ನು ನೋಡಿದರೆ ನಿಷ್ಕಲ್ಮಷ ಮತ್ತು ಮಹಾನ್ ವ್ಯಕ್ತಿತ್ವವನ್ನು ಅರಿಯಬಹುದು.

ಮಹಾರಾಜಾ ಯುಧಿಷ್ಠಿರನು ರಾಜಸೂಯ ಯಾಗವನ್ನು ಮಾಡುವ ಸಂದರ್ಭ. ಎಲ್ಲರಿಗೂ ಕಾರ್ಯಗಳನ್ನು ಹಂಚುತ್ತಿದ್ದಾರೆ. ಆಗ ಶ್ರೀಕೃಷ್ಣನು ಸ್ವಂತ ಇಚ್ಛೆಯಿಂದ ಬ್ರಾಹ್ಮಣರ ಪಾದಗಳನ್ನು ತೊಳೆಯುವ ಕೈಂಕರ್ಯವನ್ನು ಕೈಗೊಂಡನು. ಇದು ಆತನ ನಮ್ರಮನೋಭಾವಕ್ಕೆ ಉತ್ಕೃಷ್ಟ ದ್ಯೋತಕವಾಗಬಲ್ಲದು.

ಇದೇ ರಾಜಸೂಯ ಯಾಗದ ಸಂದರ್ಭದಲ್ಲಿ, ಅಂದಿನ ಪದ್ಧತಿಯ ಪ್ರಕಾರ ಸರ್ವಶ್ರೇಷ್ಠ ವ್ಯಕ್ತಿಗೆ 'ಆಗ್ರಪೂಜೆ' ಸಲ್ಲಿಸುವ ಪ್ರಸಂಗ ಬರುತ್ತದೆ. ಆಗ ಅಗ್ರಪೂಜೆಗೆ ಅರ್ಹನಾದ ವ್ಯಕ್ತಿ ಯಾರು–ಎಂಬುದನ್ನು ನಿರ್ಣಯಿಸುವುದು ಸುಲಭದ ಮಾತಲ್ಲ. ಯುಧಿಷ್ಠಿರನು ಭೀಷ್ಮ ಪಿತಾಮಹರ ಅಭಿಪ್ರಾಯ ಕೇಳಿದನು. ಭೀಷ್ಮಪಿತಾಮಹನು ಶ್ರೀಕೃಷ್ಣನೇ ಅಗ್ರಪೂಜೆಗೆ ಅರ್ಹ ವ್ಯಕ್ತಿಯೆಂದು ಸೂಚಿಸಿದನು. ಶ್ರೀಕೃಷ್ಣನಿಗೆ ಅಗ್ರಪೂಜೆ ಸಲ್ಲುವುದೆಂದು ಘೋಷಿಸಲಾಯಿತು. ಆಗ ಶ್ರೀಕೃಷ್ಣನನ್ನು ಪರಮಶತ್ರುವೆಂದು ಪರಿಗಣಿಸುತ್ತಿದ್ದ ರಾಜಾ ಶಿಶುಪಾಲನಿಗೆ ಇದು ಸಹನವಾಗಲಿಲ್ಲ. ಅನೇಕ ನಿಂದಾ ವಾಕ್ಯಗಳಿಂದ ಜರೆದು ಶ್ರೀಕೃಷ್ಣನನ್ನು ಈ ಸ್ಥಾನಕ್ಕೆ ಅನರ್ಹನೆಂದು ಘೋಷಿಸಲು ಪ್ರಯತ್ನಿಸುತ್ತಾನೆ. ಇದು ಮಹಾಭಾರತದ ಒಂದು ವಿಶಿಷ್ಟ ಸಂದರ್ಭ: ಭಾಗವತಾದಿ ಗ್ರಂಥಗಳಲ್ಲಿ ವರ್ಣಿಸಲಾದ ಪಾಪಕರ್ಮಗಳ ಆರೋಪ ನಿಜವಾಗಿದ್ದರೆ ಶಿಶುಪಾಲನಂತಹ ಆಜನ್ಮ ಶತ್ರು ಆ ದೋಷಗಳನ್ನು ತುಂಬಿದ ಸಭೆಯಲ್ಲಿ ಎತ್ತಿ ಆಡದೆ ಬಿಡುತ್ತಿರಲಿಲ್ಲ. ಆದರೆ ಅಂತಹ ಆರೋಪಗಳನ್ನು ಹೊರಿಸಿ ಶ್ರೀಕೃಷ್ಣನು ಅಗ್ರಪೂಜೆಗೆ ಅನರ್ಹನೆಂದು ಸಿದ್ಧಮಾಡಿ ತೋರಿಸಬಹುದಿತ್ತು. ಆದರೆ ಅವನೂ ಸಹ ಹಾಗೆ ಮಾಡಲಾಗದಷ್ಟು ಪರಿಶುದ್ಧ ಚಾರಿತ್ರ್ಯವಂತ ಶ್ರೀಕೃಷ್ಣ. ಆತನ ಜೀವನ ಶುದ್ಧ ಹಾಲಿನಂತೆ ಉಜ್ವಲವಾದುದು.

ಈ ಪ್ರಸಂಗದಲ್ಲಿಯೇ ಭೀಷ್ಮ ಪಿತಾಮಹರು ಶ್ರೀಕೃಷ್ಣನ ಮಹತ್ವವನ್ನು ಈ ರೀತಿ ವರ್ಣಿಸಿದ್ದಾರೆ:—

**ನ ಚ ಕಶ್ಚಿದಿಹಾಸ್ಮಾಭಿಃ ಸುಬಾಲೋಪ್ಯ ಪರೀಕ್ಷಿತಃ ।**
**ಗುಣೈರ್ವೃದ್ಧಾನ್ ಅತಿಕ್ರಮ್ಯ ಹರಿ ರರ್ಚ್ಯತಮೋ ಮತಃ ॥**
**ಜ್ಞಾನವೃದ್ಧೋ ದ್ವಿಜಾತೀನಾಂ ಕ್ಷತ್ರಿಯಾಣಾಂ ಬಲಾಧಿಕಃ ।**
**ವೈಶ್ಯಾಣಾಂ ಧನಧಾನ್ಯವಾನ್ ಶೂದ್ರಾಣಾಮೇವ ಜನ್ಮತಃ ॥**
**ಪೂಜ್ಯತಾಯಾಂ ಚ ಗೋವಿಂದೇ ಹೇತೂ ದ್ವಾವಿಹ ಸಂಸ್ಥಿತೌ ।**
**ವೇದ ವೇದಾಂಗ ವಿಜ್ಞಾನಂ ಬಲಂ ಚಾಪ್ಯಧಿಕಂ ತಥಾ ॥**
**ನೃಣಾಂ ಲೋಕೇ ಹಿ ಕೋಽನ್ಯೋಽಸ್ತಿ ವಿಶಿಷ್ಟಃ ಕೇಶವಾದೃತೇ ।**
**ದಾನಂ ದಾಕ್ಷ್ಯಂ ಶ್ರುತಂ ಶೌರ್ಯಂ ಹ್ರೀಃ ಕೀರ್ತಿರ್ಬುದ್ಧಿರುತ್ತಮಾ ॥**
**ಸನ್ನತಿಃ ಶ್ರೀರ್ಧೃತಿಸ್ತುಷ್ಟಿಃ ಪುಷ್ಟಿಶ್ಚ ನಿಯತಾಚ್ಯುತೇ ।**
**ತಮಿಮಂ ಗುಣಸಂಪನ್ನಮಾರ್ಯಂ ಚ ಪಿತರಂ ಗುರುಮ್ ॥**
**ಅರ್ಘ್ಯಮರ್ಚಿತ ಮರ್ಚಾರ್ಹಂ ಸರ್ವೇ ಸಂಕ್ಷಂತು ಮರ್ಹಥ ॥**

"ಈ ಬೃಹತ್ಸಭೆಯಲ್ಲಿ ಒಬ್ಬ ಬಾಲಕನನ್ನೂ ಬಿಡದೆ ಎಲ್ಲರನ್ನೂ ಪರೀಕ್ಷಿಸಿ ಎಲ್ಲರ ಗುಣದೋಷಗಳನ್ನು ನೋಡಿದ್ದೇವೆ. ಬ್ರಾಹ್ಮಣರಲ್ಲಿ ಜ್ಞಾನದಿಂದ ವೃದ್ಧರೆಂದು ಪರಿಗಣಿಸಲ್ಪಡುತ್ತಾರೆ; ಕ್ಷತ್ರಿಯರಲ್ಲಿ ಬಲದಿಂದಲೂ, ವೈಶ್ಯರಲ್ಲಿ ಧನಧಾನ್ಯದಿಂದಲೂ ಮತ್ತು ಶೂದ್ರರಲ್ಲಿ ಜನ್ಮ(ಅವಸ್ಥೆಯಿಂದಲೂ)ದಿಂದಲೂ ವೃದ್ಧರೆಂದೆನಿಸುತ್ತಾರೆ. ಗೋವಿಂದ (ಶ್ರೀಕೃಷ್ಣ)ನನ್ನು ಪೂಜಿಸುವಲ್ಲಿ ಎರಡು ಪ್ರಧಾನ ಕಾರಣಗಳಿವೆ. ಒಂದು ವೇದ ವೇದಾಂಗ ತತ್ತ್ವಜ್ಞನಾಗಿರುವುದು, ಎರಡು - ಅಧಿಕ ಬಲಶಾಲಿಯಾಗಿರುವುದು. ಮಾನವರಲ್ಲಿ ಕೇಶವನಿಗಿಂತ ವಿಶಿಷ್ಟ ಪುರುಷರು ಮತ್ತಾರಿದ್ದಾರು ? ಈತನಲ್ಲಿ ದಾನ, ಚಾತುರ್ಯ, ಶ್ರುತಿಜ್ಞಾನ, ಶೂರತ್ವ, (ದುಷ್ಕರ್ಮಗಳಲ್ಲಿ) ಲಜ್ಜೆ, ಯಶಸ್ಸು, ಉತ್ತಮ ಬುದ್ಧಿ, ನಮ್ರತೆ, ಲಕ್ಷ್ಮೀ, ಧೈರ್ಯ, ಸಂತೋಷ, ಪುಷ್ಟಿ—ಈ ಎಲ್ಲಾ ಗುಣಗಳು ಪೂರ್ಣವಾಗಿ ನೆಲೆಸಿವೆ. ಈ ರೀತಿ ಸಕಲ ಗುಣಸಂಪನ್ನನಾದ ಆರ್ಯನೂ, ಪಿತೃ ಮತ್ತು ಗುರು ಸಮಾನನೂ ಆದ ಕಾರಣ ಆತನಿಗೇ ಅಗ್ರಪೂಜೆ ಸಲ್ಲಬೇಕೆಂದು ನಿಶ್ಚಯಿಸಿದ್ದೇವೆ. ಎಲ್ಲರೂ ಈತನನ್ನು ಆದರಿಸತಕ್ಕದ್ದು."

ಮಹಾ ಭಾರತದಲ್ಲಿ ಅನೇಕ ಕಡೆಗಳಲ್ಲಿ ಶ್ರೀಕೃಷ್ಣನ ಉಜ್ವಲ ಆದರ್ಶಮಯ ಜೀವನವನ್ನು ಎತ್ತಿ ತೋರಿಸುವ ಘಟನೆಗಳು ಬರುತ್ತವೆ. ಆದರೆ ಭಾಗವತದಲ್ಲಿ ವರ್ಣಿಸಿರುವಂತಹ ಕುಕೃತ್ಯಗಳ ಸಾಹಸಗಳು ಎಲ್ಲಿಯೂ ಬರುವುದಿಲ್ಲ. ಮಹಾಭಾರತದಲ್ಲಿ, ಭಾರತೀಯರು ಮಾತ್ರವಲ್ಲ, ಮನುಕುಲದ ಎಲ್ಲರೂ ಹೆಮ್ಮೆಪಡುವಂತಹ ಆದರ್ಶ ವ್ಯಕ್ತಿತ್ವದ ಶ್ರೀಕೃಷ್ಣನ ವ್ಯಕ್ತಿ ಚಿತ್ರಣವಿದ್ದರೆ, ಭಾಗವತದಲ್ಲಿ ಕ್ಷುದ್ರ ಮನುಷ್ಯನೂ ನಾಚಿಕೆಯಿಂದ ತಲೆತಗ್ಗಿಸಬೇಕಾದಂತಹ ಕುಕೃತ್ಯಗಳ ಜೀವನ ಚಿತ್ರಣವಿದೆ. ಅದಕ್ಕೆ ಅನೇಕ ಸಾಂಕೇತಿಕ ಅರ್ಥಗಳಿವೆಯೆಂದು ಭಾಗವತವನ್ನು ಸಮರ್ಥಿಸಿಕೊಳ್ಳುವ ಸಾಹಸಿಗಳೂ ಈಗೀಗ ತಲೆಯೆತ್ತುತ್ತಿದ್ದಾರೆ. ಆದರೆ ಭಾಗವತಕಾರರ ಶ್ರೀಕೃಷ್ಣನ ಲೀಲೆಗಳಿಗೆ ಸಾಂಕೇತಿಕ ಅಥವಾ ಇನ್ನಾವುದೇ ರೀತಿಯ ವೈಜ್ಞಾನಿಕ ರಹಸ್ಯಗಳಿರುವುದು ಇಷ್ಟರ ತನಕ ಪ್ರಸಿದ್ಧವಾಗಿಲ್ಲ. ಈಗಿನ

ಪ್ರತ್ಯುತ್ಪನ್ನ ಮತಿಗಳು ಈ ಬಗ್ಗೆ ಹೊಸದಾಗಿ ಆವಿಷ್ಕಾರಗಳನ್ನು ಆರಂಭಿಸಬೇಕಷ್ಟೆ! ಆದ
ವೈಜ್ಞಾನಿಕ ವಿಶ್ಲೇಷಣೆ ಕೂಲಂಕಶವಾಗಿ ನೆರವೇರಿದರೆ ಒಳ್ಳೆಯದೇ. ಆದರೆ ಭಾಗವತ
ರಚಿಸಿದವರ ಉದ್ದೇಶ ಅದಲ್ಲವೆಂದೂ, ತಮ್ಮ ದುರ್ವ್ಯಸನಗಳಿಗೆ ಒಂದು ತಾತ್ವಿಕ ಅಥವಾ ದೈವಿಕ
ರೂಪ ಕೊಡುವ ಕುಚೇಷ್ಟೆ ಮಾತ್ರ ಎಂದೂ ತಿಳಿದುಬರುತ್ತದೆ. ಅವರು ಹೇಳುವಂತೆ ದುಷ್ಟ
ಶಿಕ್ಷಣ ಹಾಗೂ ಶಿಷ್ಟ ರಕ್ಷಣೆಗಾಗಿ ಜನ್ಮತಾಳಿ ಬಂದಿದ್ದರೆ, ಜನರಿಗೆ ಆದರ್ಶ ಮಾರ್ಗ ತೋರಿ
ಸಲು ಬಂದಿದ್ದರೆ, ಭಾಗವತದ ಶ್ರೀಕೃಷ್ಣನು ಯಾರಿಗೂ, ಎಂದೂ ಆದರ್ಶ ವ್ಯಕ್ತಿಯಾಗ
ಲಾರನು. ಮಹಾಭಾರತದಲ್ಲಿ ವರ್ಣಿತವಾಗಿರುವ ಶ್ರೀಕೃಷ್ಣನು ಭಗವಂತನ ಅವತಾರವೆಂದು
ಸ್ವೀಕರಿಸಿದರೂ ನಮಗೆ ಆದರ್ಶಪ್ರಾಯನಲ್ಲ. ಏಕೆಂದರೆ, ಸರ್ವಶಕ್ತನಾದ ಭಗವಂತನು
ಯಾವುದೇ ಕಾರ್ಯವನ್ನು ಲೀಲೆಯೆಂಬಂತೆ ಮಾಡಬಲ್ಲ. ಹುಲು ಮಾನವರಾದ ನಮಗೆ
ಅದು ಸಾಧ್ಯವೇ?—ಎಂಬ ಪ್ರಶ್ನೆ ಥುತ್ತೆಂದು ಎದುರಿನಲ್ಲಿ ನಿಲ್ಲುತ್ತದೆ. ಭಗವಂತನ ಅವತಾರ
ವಾದದ ಭ್ರಾಂತಿಯನ್ನು ಹೃದಯದಲ್ಲಿ ಮೂಡುವ ಭಕ್ತಿ ಕ್ರಾಂತಿಯೆಂದು ತಿಳಿದು ನಡೆಯುವ
'ಆಸ್ತಿಕ' ಸಜ್ಜನರ ಸಂಖ್ಯೆ ಹೆಚ್ಚಿರುವುದರಿಂದಲೇ ನಾವು ಆದರ್ಶ ಪುರುಷಪುಂಗವರಾದ ಶ್ರೀಕೃಷ್ಣ
ಶ್ರೀರಾಮರ ಆದರ್ಶದಿಂದ ದೂರ, ಬಹುದೂರ ಜಾರಿ ಬಂದಿದ್ದೇವೆ ಮತ್ತು ಅವರ ಪ್ರತಿಮೆಗಳ
ಅರ್ಚನೆಯೇ ಮುಕ್ತಿಸಾಧಕವೆಂಬ ದಟ್ಟವಾದ ಭ್ರಾಂತಿಗೆ ನಮ್ಮನ್ನು ನಾವು ಒಪ್ಪಿಸಿಕೊಂಡು
ಬಿಟ್ಟಿದ್ದೇವೆ. ಧೈರ್ಯ, ಸಾಹಸ, ತಾಳ್ಮೆ, ವಿವೇಕ, ಪ್ರತಿಭೆ, ಇತ್ಯಾದಿಗಳೂ ಶ್ರೀರಾಮ, ಶ್ರೀ
ಕೃಷ್ಣರೆಂಬ ಮಾನವರ, ಮಾನವ ಪುಂಗವರ ಬಾಳಿನಲ್ಲಿ ಹಾಸುಹೊಕ್ಕಾಗಿತ್ತೆಂಬ ತಥ್ಯವನ್ನು
ತಿಳಿದ ನಾವು, ಅವರನ್ನು 'ದೇವರೆ'ಂದು ಪೂಜಿಸುವ ಭಾವನಾಸ್ಥಿತಿಗೆ ತಲುಪುತ್ತಲೇ ಅದು
ನಮ್ಮಿಂದಾಗದ 'ಆದರ್ಶ' ಎಂದು ಪಲಾಯನ ಸೂತ್ರವನ್ನು ಪಠಿಸುತ್ತೇವೆ. ಆದುದರಿಂದ
ಭ್ರಮೋಚ್ಛಾದನೆ ಮಾಡಿ ನಿಜವಾದ ಶ್ರೀಕೃಷ್ಣನ ಅನುಯಾಯಿಗಳಾಗೋಣ. ●

---

## ಶ್ರಾವಣೀ ಪರ್ವದ ಸಫಲತೆಗಾಗಿ ವಿಶೇಷ ಕೊಡುಗೆ

ದಿನಾಂಕ ೧೮-೭-೮೨ರಂದು ಶ್ರೀ ಎಚ್. ಧರ್ಮಪ್ರಕಾಶ ರಾವ್, ಹಿರಿಯಡ್ಕ—ಇವರು ಶ್ರಾವಣೀ ಪರ್ವದ ಸಫಲತೆಗಾಗಿ ರೂ. ೫೧-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ದಿನಾಂಕ ೪-೮-೮೨ರಂದು ಕಾರ್ಪೊರೇಶನ್ ಬ್ಯಾಂಕ್, ಸಾಸ್ತಾನ ಬ್ರಾಂಚಿನ ಶ್ರೀ ಎಚ್. ದೇವದಾಸ ಕಾಮತ್‌ರವರು ಶ್ರಾವಣೀ ಪರ್ವದ ಸಫಲತೆಗಾಗಿ ರೂ. ೧೦೧-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ಶ್ರೀಯುತರು ತಮ್ಮ ಪರಿವಾರ ಸಹಿತ ಅಪಾರ ಧರ್ಮಾಭಿಮಾನಿಗಳೂ, ಸಕಲೈಶ್ವರ್ಯ ಸಂಪನ್ನರೂ ಆಗಿ ಸುಖದಿಂದ ಬಾಳುವಂತೆ ಅನುಗ್ರಹಿಸಲೆಂದು ಪರಮಾತ್ಮನಲ್ಲಿ ಹೃತ್ಪೂರ್ವಕ ಪ್ರಾರ್ಥಿಸುವೆವು.

—ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ, ಉಡುಪಿ.

# ಮಾನವ ಧರ್ಮಕ್ಕಾಗಿ ಬಾರಿಸುತ್ತಿದೆ ಕಾಲದ ಗಂಟೆ

★ ಎ. ಶ್ರೀಪತಿ ಆಚಾರ್ಯ.

ಯಾವುದೇ ಉನ್ನತ ಸಂಸ್ಕೃತಿಗೆ ಬದುಕಿನ ಅವಶ್ಯಕತೆ ಇಲ್ಲ. ಆದರೆ ಬದುಕು ಉದಾತ್ತವಾಗಬೇಕಾದರೆ ಸಂಸ್ಕೃತಿಯನ್ನು ಆಶ್ರಯಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನಾವು ಯೋಚಿಸಬೇಕಾದ ದಿನಗಳು ನಿಕಟವಾಗುತ್ತಿವೆ.

ಬದುಕು ಸಂಸ್ಕೃತಿಗಾಗಿ ಅಂದರೆ ಅರ್ಥಹೀನ. ಯಾಕೆಂದರೆ ಉದಾತ್ತ ಸಂಸ್ಕೃತಿಯು ಯಾವತ್ತೂ ನಿರಪೇಕ್ಷವಾಗಿರುತ್ತದೆ. ತಾತ್ತ್ವಿಕವಾಗಿ ಸಂಸ್ಕೃತಿಯು ನಿರಾಶ್ರಯದಲ್ಲೇ ಬರಬಲ್ಲುದು. ಕಾರಣ, ದೀರ್ಘಕಾಲೀನ ಬದುಕಿನ ತೀವ್ರಮಂಥನದಿಂದಲೇ ಸ್ಪಷ್ಟವಾದ ಸಂಸ್ಕೃತಿ ಯಾವತ್ತೂ ಪ್ರಕೃತಿಯ ಜತೆ ಸಹಗಾಮಿ; ಪ್ರಕೃತಿಯ ಸಾರಸತ್ವದಿಂದಲೇ ಇದರ ಉಗಮ.

ಇದರ ಬದಲಾಗಿ, ಸಂಸ್ಕೃತಿಯು ಬದುಕಿಗಾಗಿ ಎಂದು ನಾವು ಹೇಳುವುದಾದಲ್ಲಿ ಸಂಸ್ಕೃತಿಯನ್ನು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ನಮ್ಮ ಜೀವನವನ್ನು ಉದಾತ್ತಗೊಳಿಸುತ್ತಾ ಬದುಕಬಹುದು. ಇದಿಲ್ಲವಾದಲ್ಲಿ ಜೀವನವು ಸುಸಂಸ್ಕೃತವಾಗಲಾರದು. ಎಲ್ಲೆಡೆಯೂ ವಿಕೃತಿಯೇ ಮೆರೆದೀತು; ಪ್ರಕೃತಿ ವಿರೋಧಿ ಕೃತಿಗಳೇ ಹೆಚ್ಚು ಹೆಚ್ಚಾಗಿ ಗೋಚರವಾದಾವು!

'ಅಸ್ಪೃಶ್ಯತೆ', 'ಮತಾಂತರ'ಗಳ ನಮ್ಮ ಇಂದಿನ ಸಮಸ್ಯೆಗಳನ್ನು ಈ ನೆಲೆಯಲ್ಲಿ ವಿವೇಚಿಸುವುದು ಸೂಕ್ತ.

**ಅಸ್ಪೃಶ್ಯತೆಯ ಅಂತರ್ಮುಖ ಅರ್ಥ: —**

ಸ್ಪೃಶ್ಯ—ಅಸ್ಪೃಶ್ಯ ಪದಗಳ ನೇರ ಅರ್ಥ ಸ್ಪರ್ಶಯೋಗ್ಯ, ಸ್ಪರ್ಶಕ್ಕೆ ಅಯೋಗ್ಯ; ಮುಟ್ಟುವುದು ಮುಟ್ಟದಿರುವುದು ಎಂದಾಗುವುದು, ನಮ್ಮ ಅನೇಕ ನಡವಳಿಕೆಗಳಲ್ಲಿ ಇವು ಇದ್ದೇ ಇವೆ. ನಮ್ಮ ಆಚಾರಗಳಲ್ಲುಂಟು. ಒಂದು ಕುಟುಂಬದೊಳಗಿನ ಸೋದರ—ಸೋದರಿಯರು, ತಾಯಿ—ಮಕ್ಕಳು, ತಂದೆ—ಮಕ್ಕಳು ಒಬ್ಬರನ್ನೊಬ್ಬರು ವಿನಾಕಾರಣ ಮುಟ್ಟುತ್ತಿರುವುದಿಲ್ಲ. ಬ್ರಾಹ್ಮಣ ಕುಟುಂಬದಲ್ಲಿ (ಇಂದಿನ 'ಜಾತಿ') ತಂದೆಯಾದವನನ್ನು ಮಕ್ಕಳು ಪ್ರೌಢರಾದಾಗ ವಿನಾಕಾರಣ ಸ್ಪರ್ಶಿಸುವ ಕ್ರಮವಿಲ್ಲ. ಪ್ರೌಢ ಮಗನೊಬ್ಬ ಸ್ನಾನಾದಿಗಳನ್ನು ಮುಗಿಸಿಕೊಂಡು ಬಂದಾಗ ತಂದೆಯೂ ಆತನಿಗೆ ಅಸ್ಪೃಶ್ಯನೇ ಸರಿ. ಇದೇ ಪರಿಕ್ರಮವನ್ನು ನಾವು ಶಾಲೆ ಕಾಲೇಜುಗಳಲ್ಲೂ ಕಾಣಬಹುದು. ಶಿಕ್ಷಕ—ಶಿಕ್ಷಕಿಯರು ವಿದ್ಯಾರ್ಥಿ—ವಿದ್ಯಾರ್ಥಿನಿಯರಿಗೆ ಅಸ್ಪೃಶ್ಯರು. ಅರ್ಥಾತ್, ಏನೊಂದು ಕಾರಣವಿಲ್ಲದೆ ವಿದ್ಯಾರ್ಥಿಯಾದವನು ಶಿಕ್ಷಕನನ್ನಾಗಲೀ, ಶಿಕ್ಷಕಿಯನ್ನಾಗಲೀ ಸ್ಪರ್ಶಿಸುವುದು ಅಕ್ರಮವೆನಿಸುತ್ತದೆ; ಅಗೌರವ ಸೂಚಕವೆನಿಸುತ್ತದೆ. ಇದು ಇಂದಿನವರೆಗಂತೂ ಈ ಮಣ್ಣಿನಲ್ಲಿ ಜೀವನ ಸತ್ಯ!

# ರಾಷ್ಟ್ರೀಯ ಸ್ವಯಂಸೇವಕ ಸಂಘ,

**ಸಂತ್ರಸ್ತ ಪರಿಹಾರ ಸಮಿತಿ — ಕರ್ನಾಟಕ, ಬೆಂಗಳೂರು.**

## ಉಡುಪಿಯ ನೆರೆ ಸಂತ್ರಸ್ತರ ನೆರವಿಗೆ ಮನವಿ

ದಿನಾಂಕ 9-6-1982ರಂದು ಉಡುಪಿಯಲ್ಲಿ ಸಂಭವಿಸಿದ ಭೀಕರ ನೆರೆ ಹಾವಳಿಯ ಸಂದರ್ಭದಲ್ಲಿ ಜೀವರಕ್ಷಣೆ, ತುರ್ತು ನೆರವು, ಕುಸಿದು ಬಿದ್ದಿರುವ ಮನೆಗಳ ಅವಶೇಷಗಳನ್ನು ಸಾಗಿಸುವುದೇ ಮೊದಲಾದ ಸಂತ್ರಸ್ತರ ಸೇವೆಯಲ್ಲಿ ತನ್ನ ಸ್ವಯಂ ಸೇವಕರನ್ನು ತೊಡಗಿಸಿ ನೆರವಾದ ರಾ. ಸ್ವ. ಸಂಘ ಸಂತ್ರಸ್ತರ ಪುನಃ ನೆಲಸುವಿಕೆಯಲ್ಲೂ ತನ್ನ ಸೇವೆಯನ್ನು ಸಲ್ಲಿಸಲು ಮುಂದಾಗಿದೆ. ಮನೆ ಕಳೆದುಕೊಂಡವರಿಗೆ ಮನೆ ಕಟ್ಟಿಸಿ ಕೊಡುವ ಕಾರ್ಯಕ್ರಮದಲ್ಲಿ ಸರಕಾರದಿಂದ ಒದಗಿಸಲಾಗುವ ಸಹಾಯಕ್ಕೆ ಪೂರಕವಾಗಿ ಧನ ಸಹಾಯ ಒದಗಿಸಿ, ಮನೆಗಳನ್ನು ಶೀಘ್ರವಾಗಿ ರಚಿಸುವಂತೆ ಸಹಾಯ ಮಾಡಲು ಪ್ರಯತ್ನಿಸಲಾಗಿದೆ. ಇದೆಲ್ಲ ಕಾರ್ಯರೂಪಕ್ಕೆ ಬರಲು ಸಾರ್ವಜನಿಕರ ಮುಕ್ತ ಹಸ್ತದ ಧನ ಸಹಾಯ ಅತಿ ಅಗತ್ಯ. ಈ ಹಿಂದೆಯೂ ಸಹಕರಿಸಿದಂತೆ ಈ ಸಲವೂ ಪರಿಹಾರ ಸಮಿತಿಗೆ ಉದಾರ ದೇಣಿಗೆಯನ್ನು ಕೊಟ್ಟು ಸಹಕರಿಸಬೇಕಾಗಿ ನಮ್ರ ವಿನಂತಿ.

**ಡಾ| ಕೃ. ರಾ. ಕುಲಕರ್ಣಿ,**
ಪ್ರಾಂತ ಸಂಘಚಾಲಕ.

**ಅರಕಲಿ ನಾರಾಯಣ,**
ಪ್ರಾಂತ ಕಾರ್ಯವಾಹ.

**ಪಂಚಮಾಲ್ ವಾಸುದೇವ ಕಾಮತ್,**
ಮಂಗಳೂರು ವಿಭಾಗ ಸಂಘಚಾಲಕ.

**ಡಾ| ಪ್ರಭಾಕರ ಭಟ್,**
ವಿಭಾಗ ಕಾರ್ಯವಾಹ.

**ವಿ. ಸೂ:** ಪರಿಹಾರ ಸಮಿತಿಗೆ ನೀಡುವ ದೇಣಿಗೆಗೆ ಆದಾಯ ತೆರಿಗೆ ವಿನಾಯಿತಿ ಇದೆ. ಚೆಕ್ಕು ಯಾ ಡ್ರಾಫ್ಟನ್ನು – ರಾಷ್ಟ್ರೀಯ ಸ್ವಯಂಸೇವಕ ಸಂಘ ಸಂಚಾಲಿತ ಸಂತ್ರಸ್ತ ಪರಿಹಾರ ನಿಧಿ, ಬೆಂಗಳೂರು – ಈ ಹೆಸರಿಗೆ ಬರೆಯಿರಿ.

—: ದೇಣಿಗೆ ನೇರವಾಗಿ ಕಳುಹಿಸಬಹುದಾದ ವಿಳಾಸಗಳು :—

ರವಿ,
ಸಂಘ ಕಾರ್ಯಾಲಯ,
ಪ್ರತಾಪ ನಗರ,
ಮಂಗಳೂರು – 3.
ದೂರವಾಣಿ: 27755

ಅಮ್ಮುಂಜೆ ಲಕ್ಷ್ಮೀಕಾಂತ ನಾಯಕ್,
ಮಾಜಿ ನಗರ ಸಭಾ ಸದಸ್ಯ.
ರಾ. ಸ್ವ. ಸಂಘ ನೆರೆ ಸಂತ್ರಸ್ತರ ಪರಿಹಾರ ಸಮಿತಿ,
ಉಡುಪಿ – 576 101.
ದೂರವಾಣಿ: 7139

ನಮ್ಮ ಇಂದಿನ ಕಛೇರಿಗಳನ್ನು ನೋಡೋಣ. ಒಂದೇ ಆಫೀಸಿನ ಒಳಗೆ ಮೇಲಧಿಕಾರಿಯ ಹೆಗಲು-ವೈಮೇಲೆ ಕೈ ಇಟ್ಟು ಅಥವಾ ಆತನನ್ನು ಮುಟ್ಟಿಕೊಂಡೇ ಆತನ ಸಹಾಯಕರು ಮಾತಾಡುವುದಿಲ್ಲ. ಅಥವಾ, ಈ ಸಹಾಯಕರ ಹೆಗಲಮೇಲೆ ಕೈಇರಿಸಿಕೊಂಡೇ ಗುಮಾಸ್ತರಾಗಲೀ, ಪರಿಚಾರಕರಾಗಲೀ. ಜವಾಡಮಾಲಿಗಳಾಗಲೀ ಮಾತನಾಡುತ್ತಿರುವುದಿಲ್ಲ.

ಮಂತ್ರಿ ಸಂಪುಟದಲ್ಲೇ ಆಗಲಿ, ಮುಖ್ಯಮಂತ್ರಿಯವರ ಹೆಗಲ ಮೇಲೆ ಕೈಏರಿಸಿಕೊಂಡಾಗಲೀ ಅವರನ್ನು ಮುಟ್ಟಿಕೊಂಡೇ ಆಗಲೀ ಸಂಪುಟದ ಸಹಾಯಕ ಸಚಿವರು ಮಾತನಾಡುತ್ತಿರುವುದಿಲ್ಲ. ಸಂಪುಟ ಸದಸ್ಯರೆಲ್ಲರಿಗೂ ಮುಖ್ಯಮಂತ್ರಿಯವರು ಅಸ್ಪೃಶ್ಯರೇ; ಹಾಗೆ ಅವರವರೊಳಗೆ ಕೂಡಾ!

ಇಂಥ ಒಂದು ರಿವಾಜು ಎಲ್ಲೆಡೆಯೂ ವ್ಯಾಪ್ತವಾಗಿದೆ. ಇದು ಈ ಮಣ್ಣಿನ ಸಂಸ್ಕೃತಿಯ ದ್ಯೋತಕ. ಆಹಾರ, ಆಚಾರ, ವಿಚಾರಗಳಲ್ಲಿ ವ್ಯತ್ಯಾಸಗಳು, ಬೇರೆ ಬೇರೆಯವರ ಜವಾಬ್ದಾರಿಯಲ್ಲಿರುವ ದೂರಾಂತರ, ಈ ಜವಾಬ್ದಾರಿಗಳೊಳಗಿನ ಸಂಸರ್ಗದಿಂದ ಬಂಬಹುದಾದ ಅನೇಕಾನೇಕ ದುಷ್ಪರಿಣಾಮಗಳು-ಒಂದೊಂದು ಸೂಕ್ಷ್ಮವೂ ಗಹನವೂ ಆದುದು; ವಿಚಾರಣೀಯವೂ ಅಹುದು.

ಮೇಲಿನ ಎಲ್ಲ ಸಂದರ್ಭಗಳಲ್ಲೂ ಅಸ್ಪೃಶ್ಯತೆಯ ಅಂಶ ಅಡಕ. ಆದರೂ, ಸಂಘರ್ಷದ ಬೀಜವಿಲ್ಲ; ಸಾಮರಸ್ಯದ ಸಾವಯವ ಬಂಧವಿದೆ! ಸಮ್ಮಿಲನದ ಬೀಜವಿದೆ; ಏಕಾತ್ಮಕಲೆಯ ಭಾವವಿದೆ! ಇಲ್ಲಿ ಸಂಸೇವನೆಯ ಅಂಕುರವಿದೆ! ಇಲ್ಲಿಂದಲೇ ಸಹಕಾರದ ವೃಕ್ಷ ಬೆಳೆಯಬಲ್ಲುದು. ಇಷ್ಟಾಗ್ಯೂ, ಒಂದೊಂದು ಹಂತದಲ್ಲೂ ಪೂಜ್ಯತೆಯ ಭಾವವಿದೆ; ಪ್ರೀತಿ ವಾತ್ಸಲ್ಯಗಳ ಚಿಗುರುಗಳಿವೆ. ಇಂಥ ಒಂದು ಭಾವವು ಸಮಾಜದ ಸಾವಯವಬಂಧವಲ್ಲವೆ ?

ಈ ಭಾವ ಹಿಂದೂ ಇತ್ತು; ಇಂದೂ ಇದೆ; ಮುಂದೂ ಇರುತ್ತದೆ. ಇದು ಇಲ್ಲವಾದಲ್ಲಿ ಸಂಸರ್ಗ ಮಾತ್ರದಿಂದಲೇ ಸೃಷ್ಟಿಯಾಗಬಲ್ಲ ಸರಕುಗಳು ಸಹನೀಯವಾಗವು—ಯಾವ ಸಮಾಜಕ್ಕೂ! ಸಮಷ್ಟಿ ದೃಷ್ಟಿಕೋನದಿಂದ ನೋಡಿದಾಗ ಇದರ ಸೂಕ್ಷ್ಮಎಳೆಗಳು ಗೋಚರವಾಗುವಂಥವು!

ಇದನ್ನು ತೋರಿದ್ದು ಧರ್ಮವಲ್ಲ; ಧರ್ಮಮೂಲದಿಂದಲೇ ಜನ್ಮಪಡೆದ ನೀತಿಶಾಸ್ತ್ರ. ಇದನ್ನು ಮಾನವ ಸಂಸ್ಕೃತಿಯಲ್ಲಿ ನಾವು ಎಲ್ಲೆಲ್ಲೂ ಕಾಣಬಹುದು. ಈ ಕುರಿತು ನಾವಾರೂ ಗುಲ್ಲೆಬ್ಬಿಸುತ್ತಿಲ್ಲ; ಗುಲ್ಲೆಬ್ಬಿಸಬಾರದು ಕೂಡಾ. ಯಾಕೆಂದರೆ ಒಂದೊಂದು ಗುಲ್ಲೂ ಭದ್ರ ಸಮಾಜಕ್ಕೆ ನಾವು ಸೆಟೆಯುವ ಒಂದೊಂದು ಬಿರುಕು. ಕೊನೆಗೆ ಇದುವೇ ಆತ್ಮಘಾತಕವಾಗುವುದರಲ್ಲಿ ಸಂಶಯವಿಲ್ಲ. ಇದು ಉತ್ಥಾನಕ್ಕೆ ಮಾರ್ಗವಾಗುವ ಬದಲು ಪತನಕ್ಕೆ ನಾಂದಿಯಾಗುವುದು.

ಇಂಥ ನೀತಿಶಾಸ್ತ್ರ ಜಗತ್ತಿನ ಯಾವ ಸಮಾಜಕ್ಕೆ ಬೇಡ? ಯಾವ ಮತಕ್ಕೆ ಬೇಡ? ಪ್ರಾಜ್ಞರು ವಿಚಾರವಂತರು ಸ್ಪೃಶ್ಯ-ಅಸ್ಪೃಶ್ಯ ಎಂಬೀ ಪದಗಳ ನಿಘಂಟಿನ ವ್ಯಾಪೀ ಅರ್ಥವನ್ನು ಚಿಂತನೆ ನಡೆಸಬೇಕು. ನಮ್ಮ ನಡೆನುಡಿಯನ್ನು ಅನುನುಡಿಸಬೇಕು.

**ಭಾರತೀಯ ಸಂಸ್ಕೃತಿಯ ಶಿಥಿಲ ಶತಕಗಳು:—**

ಬುದ್ಧನ ಕಾಲದಿಂದೀಚೆಗಿನ ಭಾರತದ ಇತಿಹಾಸವನ್ನೊಮ್ಮೆ ಈಗ ಅವಲೋಕಿಸೋಣ. ಭಾರತದ ಮೇಲೆ ನಡೆದ ಆಕ್ರಮಣಗಳೆಲ್ಲವೂ ಬುದ್ಧನ ಕಾಲಾನಂತರ! ಹೂಣರು ಶಕರು ಪ್ರಾರಂಭದ ಧಾಳಿಕೋರರು; ಪ್ರಪ್ರಥಮವಾಗಿ ಭಾರತದ ನೆಲದ ಮೇಲೆ ಕಾಲಿಟ್ಟವರು. ಜನಾಂಗದ ಪೂರ್ವ ಪರಂಪರೆಯ ಪ್ರವಾಹ ಹರಿದು ಬಂದುದರ ಕುರಿತಾಗಿ ಕೆಲವೊಂದು ಚಾರಿತ್ರಿಕ ಅಂಶಗಳು ಬಂದಿದ್ದರೂ ಅವು ಧಾಳಿಗಳಾಗಿರದೆ ಜೀವನದ ಉದಾತ್ತೀಕರಣಕ್ಕಾಗಿ ನಡೆದ ವಲಸೆಗಳಾಗಿರಬಹುದು! ಬುದ್ಧನ ಕಾಲದ ಮೊದಲು ಧಾಳಿಯಾದುದರ ಕುರಿತು ಚರಿತ್ರೆ ಇಲ್ಲ! ಅಥವಾ, ಧಾಳಿ ನಡೆದಿದ್ದರೂ ಭಾರತದ ಕ್ಷಾತ್ರಶಕ್ತಿ ಅದನ್ನು ಎದುರಿಸುವಲ್ಲಿ ಶಕ್ತವಾಗಿತ್ತೆಂದು ತಿಳಿಯಬಹುದಾಗಿದೆ. ಬೌದ್ಧಮತವು ಪ್ರಚಾರಕ್ಕೆ ಬಂದಂತೆ ಕ್ಷಾತ್ರಶಕ್ತಿ ಕುಂದುತ್ತಾ ಸಾಗಿದುದರಿಂದ ಮುಂದೆ ದೇಶದ ಮೇಲೆ ಧಾಳಿಯ ಸರಣಿಯೇ ನಡೆದುದು ಐತಿಹಾಸಿಕ ಸತ್ಯವಷ್ಟೆ?

ಒಬ್ಬೊಬ್ಬ ಆಕ್ರಮಣಕಾರರೂ ಈ ನೆಲದಲ್ಲಿ ಬೇರು ಬಿಟ್ಟಂತೆ ಇಲ್ಲಿನ ಜನಜೀವನದಲ್ಲಿ ತುಂಬಿತುಳುಕುತ್ತಿದ್ದ ಸಂಘಟನೆಯಿಂದ ಅವಾಕ್ಕಾಗಿ ನೋಡುವಂತಾಯಿತು. ಇಂಥ ಸಂಘಟನೆಯ ಅಂತರ್ಯದಲ್ಲಿ ಅಡಗಿರುವ ಮೂಲದ ಅನ್ವೇಷಣೆಯೇ ಈ ಧಾಳಿಕೋರರ ವಿದೇಶೀಯರ ಮೂಲತಃ ಗುರಿಯಾಯಿತು. ಈ ಮೂಲಬೇರನ್ನು ಕಿತ್ತೆಸೆಯಲು ಸಾಧ್ಯವಿರುವೆಲ್ಲಾ ಕುಟಿಲೋಪಾಯಗಳನ್ನು ಯೋಜಿಸಿದರು. ಒಟ್ಟಂದದಲ್ಲಿರುವ ಸಮಾಜವನ್ನು ವಿಭಜಿಸುವ ತಂತ್ರಗಳನ್ನು ಹೂಡಿದರು. 'ಭೇದ' 'ದಂಡ'ಗಳನ್ನು ಚತುರೋಪಾಯಗಳಿಂದ ಪುಷ್ಕಳವಾಗಿ ಬಳಸಿದರು.

'ಸಮಾಜ ಪುರುಷ'ನ ಅಂಗಗಳನ್ನು ಕತ್ತರಿಸುವ ಕ್ರೂರೋಪಾಯಗಳನ್ನು ಸಜ್ಜುಗೊಳಿಸಿದರು. ವರ್ಣಧರ್ಮದ ಅವಹೇಳನವನ್ನು ಅವರು ಮಾಡುವುದಲ್ಲದೆ ಇಲ್ಲಿನವರಿಂದಲೂ ಪುಷ್ಕಳವಾಗಿ ಮಾಡಿಸುವುದರಲ್ಲೂ ಯಶಸ್ವಿಯಾದರು. 'ಜಾತಿ-ಜಾತಿ' ಯನ್ನು ಸೃಷ್ಟಿ ಹಾಕುವಲ್ಲೂ ಇವರ ತಂತ್ರಗಳೇ ಕೈಗೂಡಿದವು. ಕ್ರಮೇಣ ಜಾತಿ ಜಾತಿಗಳೊಳಗೆ ವಿಷದ ಬೀಜವನ್ನು ನೆನೆಹಾಕಿದರು. ನೆಲದ ಗುಣವಾಗಿದ್ದ 'ಆತ್ಮಿಕ' ಚಿಂತನೆಯನ್ನು ವಿಮುಖಗೊಳಿಸಿ 'ಆರ್ಥಿಕ' ಚಿಂತನೆಯತ್ತ ಜನಸಮುದಾಯದ ಗಮನ ಸೆಳೆದರು. ಶಿಥಿಲಗೊಳ್ಳುತ್ತಾ ಸಾಗುವ ಸಂಸ್ಕೃತಿಯಲ್ಲಿ ಬಾಹ್ಯ ಭೌತ ವಿಚಾರಗಳ ಮಂಥನವೇ ಶ್ರೇಷ್ಠ ಹಾಗೂ ಜೀವನಕ್ಕೆ ಸನಿಹ ಎಂಬ ಭ್ರಮೆಯನ್ನು ಹುಟ್ಟಿಸಿ ಶಾಂತಿಯಲ್ಲಿ ಬದುಕುತ್ತಿದ್ದ ಜನಾಂಗವನ್ನು ಅಶಾಂತಿಗೆ ತಳ್ಳಿದರು.

ಅಸ್ಪೃಶ್ಯತೆಯ ನೇರ ಅರ್ಥವನ್ನು ಗೌಣವಾಗಿಸಿ ವಿರುದ್ಧ ಅರ್ಥ ನೀಡುವ ವಿಚಾರಧಾರೆಯ ವಿಷಬೀಜ ಬಿತ್ತಲು ನೆಲ ಪಕ್ವವಾಗಿತ್ತು. ಸಾಲದೆಂದರೆ ಅಪಾರ್ಥದ 'ಅಸ್ಪೃಶ್ಯತೆ'ಯ ಬ್ರಹ್ಮರಾಕ್ಷಸನ ಬೆಳವಣಿಗೆಗೆ ಬೇಕಾದ ಎಲ್ಲಾ ಕುಟಿಲೋಪಾಯಗಳನ್ನು ಹೂಡಿ ಜನಾಂಗವನ್ನು ವಿವಂಚನೆಯಲ್ಲಿ ತಳ್ಳಿದರು. ಜತೆಗೆ ತಾವು ತಂದಿದ್ದ ಇನ್ನೂ ವಿಕಾಸದ ಹಂತದಲ್ಲಷ್ಟೇ ಇದ್ದ ಅರೆಹಸಿ ಅರೆಬೆಂದ 'ಮತ'ಗಳನ್ನು ಕಾಲ ದೇಶದ ಗಣನೆ ಇಲ್ಲದೆ ಆದರ

ಸೂಕ್ಷ್ಮಗಳನ್ನು ಅರಿಯದೆ ಈ ನೆಲದಲ್ಲಿ ಬೆಳೆಸಬೇಕೆಂಬ ತವಕವನ್ನು ತೋರಿದರು. ಈ ಮಧ್ಯೆ ಶಿಥಿಲ ಶತಮಾನಗಳ ಇತಿಹಾಸದ ಪುಟಗಳನ್ನೇ ಸನಾತನ ಸಂಸ್ಕೃತಿಯು ದಾಟಿ ಬಂದು ಸಿಂಹಾವಲೋಕನ ಘಟ್ಟವನ್ನು ತಲುಪುತ್ತಿದೆಯೋ ಅಂತನ್ನಿಸುತ್ತದೆ.

ಇದರ ಫಲ—ಇಂದಿನ ಜಾತಿ-ಜಾತಿ; ಅಸ್ಪೃಶ್ಯತೆ; ಮತಾಂತರ; ನೈತಿಕ-ಸಾಂಸ್ಕೃತಿಕ ಪತನ; ವ್ಯಾಪಾರ ಪ್ರಚಾರಗಳ ಡಾಂಭಿಕತನ; ಶುಷ್ಕ ಮಾನವ ಜೀವನ!

**ವರ್ಣಧರ್ಮದ ಬಣ್ಣವೇನು ?**

ಸನಾತನ ಧರ್ಮದಲ್ಲಿ ಮಾನವರ ಗುಣ ಸ್ವಭಾವ ಕರ್ಮಗಳ ಆಧಾರದಲ್ಲಿ ವರ್ಣಗಳನ್ನು ಗುರುತಿಸಲಾಗುತ್ತಿತ್ತು. ಬ್ರಾಹ್ಮಣ ಮನೆಯಲ್ಲಿ ಜನ್ಮ ಪಡೆದವನು ವೈಶ್ಯನೋ ಕ್ಷತ್ರಿಯನೋ ಆದದ್ದಿದೆ. ವೈಶ್ಯ ಯಾ ಕ್ಷತ್ರಿಯನ ಮನೆಯಲ್ಲಿ ಜನ್ಮ ಪಡೆದವನು ಬ್ರಹ್ಮತೇಜಸ್ಸಿನಿಂದ ಬ್ರಾಹ್ಮಣನಾದುದೂ ಇದೆ. ಗುಣಕ್ಕೆ, ಸ್ವಭಾವಕ್ಕೆ—ಆ ಕಾರಣದಿಂದ ಯೋಗ್ಯತೆಗೆ — ಸಮಾಜದಲ್ಲಿ ಗೌರವವಿತ್ತು. (ಇಂದು ಯೋಗ್ಯತೆಗೆ ಬೆಲೆ ಎಲ್ಲಿದೆ?) ಸುಸೂತ್ರ ಕಾರ್ಯಗಳು ನಡೆಯುವುದು ಸಾಧ್ಯವಿತ್ತು. ಆದರೆ ಇಂದು ಜಾತಿಯನ್ನು ಜನ್ಮಮಾತ್ರದಿಂದಲೇ ನಿರ್ಧರಿಸುತ್ತಿದ್ದೇವೆ; ಗುಣಕರ್ಮಕ್ಕೆ ಪ್ರಾಧಾನ್ಯವಿಲ್ಲವಾಗಿದೆ. ಇಂದು ವರ್ಣಕ್ಕೂ ಜಾತಿಗೂ ಇರುವ ಭೇದವೇ ಅರ್ಥವಾಗದ ದುಃಸ್ಥಿತಿ. ಧರ್ಮದ ಅಧೀನ ವರ್ಣಗಳು ಇರಬೇಕಾದಲ್ಲಿ, ವರ್ಣಗಳ ಆಧೀನ ಧರ್ಮವನ್ನು ಕಟ್ಟಿಡುವ ಯತ್ನ ಇಂದು ಸರ್ವಕಡೆ ನಡೆಯುತ್ತಿರುವುದು—ಅದೂ ವರ್ಣವನ್ನು ಜಾತಿಗೆ ಸಮೀಕರಿಸಿಕೊಂಡು! ಆದರೆ, 'ಜನ್ಮನಾ ಜಾಯತೇ ಜಂತುಃ'. ಮಾನವ ಮಾತ್ರನು ಹುಟ್ಟಿನಿಂದ ಬರಿಜೀವಿ. ಮತ್ತೆ ಸಂಸ್ಕಾರದಿಂದ ಪಡೆಯಬಹುದಾದ ಗುಣಧರ್ಮ ಸ್ವಭಾವವನ್ನು ಅನುಸರಿಸಿ ವರ್ಣನಿರ್ಧಾರಗೊಳ್ಳುವಂತಹುದು.

ಇಲ್ಲಿ ವರ್ಣಧರ್ಮದ ಸಾಂಗತ್ಯವನ್ನೊಮ್ಮೆ ಅವಲೋಕಿಸೋಣ. ಚಾತುರ್ವರ್ಣ್ಯದಂತೆ—ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ—ಈ ನಾಲ್ವರೂ ಸಮಾಜ ಪುರುಷನ ಅಂಗಗಳಿದ್ದಂತೆ. ಸಮಾಜದಲ್ಲಿರುವ ಮಾನವರಲ್ಲಿ ಗುಣಕರ್ಮಗಳಲ್ಲಿ ವ್ಯತ್ಯಾಸಗಳು ಇದ್ದೇ ಇರುತ್ತವೆ. ಇದು ಅನಿವಾರ್ಯ, ಅಂತೆಯೇ ನಾಲ್ಕು ವರ್ಣಗಳೂ ಅಂಗಗಳಷ್ಟೇ ಅನಿವಾರ್ಯ. ಒಂದು ಅಂಗ ಮತ್ತೊಂದು ಅಂಗಕ್ಕೆ ಪೂರಕ, ಪೋಷಕ. ಯಾವುದೇ ಸಮಾಜದಲ್ಲಿ ಇಂಥ ಒಂದು ವರ್ಗೀಕರಣ ಇರಲೇಬೇಕಾದ ಅನಿವಾರ್ಯತೆಯನ್ನು ನಾವು ಅರ್ಥಮಾಡಿಕೊಂಡಲ್ಲಿ ವೃಥಾ ಸಂಘರ್ಷಕ್ಕೆ ಎಡೆ ಎಲ್ಲಿ?

ಇಂದು ಒಂದು ಕಛೇರಿಯಲ್ಲೂ ಇಂಥದೇ ವರ್ಗೀಕರಣ ಅನಿವಾರ್ಯವಲ್ಲವೆ? ಒಬ್ಬ ಆಫೀಸರ, ಆತನ ಕೆಳಗೆ ಕೆಲವು ಸಹಾಯಕರು, ಅವರ ಕೆಳಗೆ ಕೆಲ ಗುಮಾಸ್ತರು, ಕೊನೆಗೆ ಸ್ವೀಪರ್, ಜಾಡಮಾಲಿ — ಜಗತ್ತಿನ ಯಾವ ಸಮಾಜದಲ್ಲಿ ಈ ತರದ ವ್ಯವಸ್ಥೆ ಇಲ್ಲ? ಇಲ್ಲಿ ಅವರವರ ಗುಣಕರ್ಮಗಳಿಂದಲ್ಲವೇ ವರ್ಗೀಕರಣ ನಡೆದುದು? ಬದಲಾಗಿ, ಜಾಡಮಾಲಿಯನ್ನೇ ಆಫೀಸರನಾಗಿಸಿ, ಹಾಗೆಯೇ ಮತ್ತೆ ಉಳಿದವರೆಲ್ಲರನ್ನೂ ಆಫೀಸರರಾಗಿಸಿದರೆ ಕಛೇರಿಯಲ್ಲಿ ದಾಖಲೆಗಳನ್ನು ಬರೆಯುವರಾರು? ಕಛೇರಿಯನ್ನು ಗುಡಿಸಿ ಸ್ವಚ್ಛಗೊಳಿಸುವವರಾರು? ವರ್ಗ ಸಂಘರ್ಷದ ಬಗ್ಗೆ ದೊಡ್ಡ ದೊಡ್ಡ ಮಾತನ್ನು ಆಡುವವರು ಸಾಮಾಜಿಕ ಜೀವನದ

ಸಂವಹನದ ಬಗೆಗೂ ದೀರ್ಘವಾಗಿ ಆಳವಾಗಿ ಆಲೋಚಿಸುವುದು ಅಗತ್ಯ. ಪರಿಪೂರ್ಣವಾದೊಂದು ಪರ್ಯಾಯ ವ್ಯವಸ್ಥೆಯನ್ನು ಇರಿಸಿಕೊಂಡಿರಬೇಕಾದುದೂ ಅವಶ್ಯ.

ಇನ್ನೊಂದು ಸಮಾಜವನ್ನು ಊಹಿಸೋಣ. ಈ ಸಮಾಜದಲ್ಲಿರುವವರೆಲ್ಲರೂ ಸೈನಿಕರು; ಇವರ ಗುಣಕರ್ಮ ಕ್ಷಾತ್ರ ಶಕ್ತಿಯನ್ನು ಪ್ರತಿಬಿಂಬಿಸುವಂತಹುದು. ಈ ಸಮಾಜದ ಪೋಷಣೆಗೆ ಬೇಕಾದ ಆಹಾರದ ವ್ಯವಹಾರಗಳನ್ನಾರು ನೋಡಿಕೊಳ್ಳಬೇಕು? ವೈಶ್ಯರು ಬೇಡವೇ? ಕೃಷಿಯನ್ನು ಯಾರು ಮಾಡಬೇಕು? ಇಡೀ ಸಮಾಜಕ್ಕೆ ಆಪತ್ತು ಬಂದಾಗ ಚಾಣಾಕ್ಷ ಬೌದ್ಧಿಕ ಆದೇಶವೆಲ್ಲಿಂದ ಬರಬೇಕು? ಇವುಗಳನ್ನು ನಾವು ಸೂಕ್ಷ್ಮವಾಗಿ ಯೋಚನೆ ಮಾಡಬೇಕಾದುದು ಅವಶ್ಯವಲ್ಲವೆ? ಅಂದರೆ ಇವೆಲ್ಲ ಎಷ್ಟು ಅನಿವಾರ್ಯವೆನಿಸುತ್ತವೆಯೋ ಅಷ್ಟೇ ಅನಿವಾರ್ಯ ಬೇರೆ ಬೇರೆ ಚತುರ್ವರ್ಣಗಳೊಳಗಿನ ಸಮರಸದ ಜೀವನ. ಇಲ್ಲಿ ಸಂಘರ್ಷವನ್ನೇ ದೊಡ್ಡದು ಮಾಡಿ ಸಮ್ಮಿಲನವನ್ನು ಗೌಣವಾಗಿಸಿದಲ್ಲಿ ಸಾವಯವ ಸಮಾಜದ ಅಸ್ತಿತ್ವ ಸಾಧ್ಯವೆ?

ಪ್ರಾಜ್ಞರು ಈ ವಿವೇಚನೆಯನ್ನು ದೇಶಕಾಲಾತೀತವಾಗಿ ನಡೆಸಬೇಕು. ಆಗಲೇ ಸನಾತನ ಧರ್ಮದ ಮೂಲ ಅಡಿಪಾಯದ ಮೇಲೆ ಬೆಳಕು ಚೆಲ್ಲಲು ಸಾಧ್ಯವಾದೀತು. ಜನಾಂಗಗಳು ಇರುವಷ್ಟು ಕಾಲ ಈ ವ್ಯವಸ್ಥೆ ಅನಿವಾರ್ಯವೆಂದಾದಲ್ಲಿ ಇಂಥ ಒಂದು ವ್ಯವಸ್ಥೆಯನ್ನು ಗುರುತಿಸಿದ ಸನಾತನ ಧರ್ಮ ಶಾಶ್ವತವಲ್ಲವೆ? ಸನಾತನ ಧರ್ಮದ ಭದ್ರತೆ ಇಲ್ಲದೆ ಈ ಮೂಲವನ್ನು ತಿಳಿದೇ ವಿಘಟಕರು ಸಮಾಜವನ್ನು ಛಿನ್ನವಿಚ್ಛಿನ್ನವಾಗಿ ಒಡೆಯಲು 'ಜಾತಿ'ಯ ವಿಷಬೀಜವನ್ನು ಸುಲಭವಾಗಿಯೇ ಯಾರಿಗೂ ಅರಿವಾಗದಂತೆ ಬಿತ್ತಿದರು.

ವರ್ಣಧರ್ಮದಲ್ಲಿ ಮಾನವ ಮಾತ್ರನಿಗೆ ಯೋಗ್ಯತೆಯನ್ನು ಸಂಪಾದಿಸುವ ಅವಕಾಶವಿತ್ತು. ಶೂದ್ರನಾಗಲೀ, ಕ್ಷತ್ರಿಯನಾಗಲೀ ಋಷಿತ್ವವನ್ನು ಸಂಪಾದಿಸುವುದು ಶಕ್ಯವಿತ್ತು. ಮಾನವಮಾತ್ರನ ಆತ್ಮೋದ್ಧಾರವೇ ಜೀವನದ ಗುರಿ ಎಂದು ಧರ್ಮ ಸಾರಿತ್ತು. ಇದು ಮಾನವ ಧರ್ಮ. ಮಾನವರೆಲ್ಲರನ್ನೂ 'ಧಾರಣ' ಮಾಡುವುದು ಧರ್ಮದ ಕಾರ್ಯ. 'ಧಾರಣೆ'ಗೆ ಇಡುವುದು ಅಧರ್ಮ! ಯಾರು ಧರ್ಮವನ್ನು ರಕ್ಷಿಸುತ್ತಾರೋ ಅವರನ್ನು ಧರ್ಮ ರಕ್ಷಿಸುತ್ತಿದ್ದುದು ಈ ರೀತಿಯಲ್ಲಿ—"ಧರ್ಮೋ ರಕ್ಷತಿ ರಕ್ಷಿತಃ" ಎಂದು. ಬ್ರಾಹ್ಮಣನಿಗೆ ಆತ್ಮೋದ್ಧಾರ ಎಷ್ಟು ಹಕ್ಕಿನದೋ ಶೂದ್ರನಿಗೂ ಅಷ್ಟೇ ಹಕ್ಕಿನದು. ಶೂದ್ರರಾಗಿದ್ದವರು, ವೈಶ್ಯರಾಗಿದ್ದವರು, ಕ್ಷತ್ರಿಯರಾಗಿದ್ದವರು (ಬ್ರಾಹ್ಮಣರಾಗಿದ್ದವರು ಬಿಡಿ), ಕೊನೆಯಲ್ಲಿ ಸ್ತ್ರೀಯರಾಗಿದ್ದವರೂ ಕೂಡಾ ಋಷಿತ್ವವನ್ನು ಸಂಪಾದಿಸಬಹುದಾಗಿತ್ತು. ಇದಕ್ಕೆ ದೃಷ್ಟಾಂತಗಳು ವೈದಿಕ ಸಾಹಿತ್ಯ ಇತಿಹಾಸದಲ್ಲಿಯೂ ಇವೆ. ಇಂದು ಸನಾತನ ಧರ್ಮದ ಹೆಸರಿನಲ್ಲಿರುವ ಚಾಲ್ತಿಯ ಧರ್ಮ (?)ವು ಜಾತಿ ಜಾತಿಗೂ ಪಕ್ಷಪಾತಿಯಾಗಿಲ್ಲವೆ? ಇದಲ್ಲವೆ ಸಂಘರ್ಷದ ಬೀಜ? ಆದರೆ, ಸನಾತನ ಧರ್ಮ ಯಾರ ಪಕ್ಷಪಾತಿಯೂ ಆಗಿರಲಿಲ್ಲ. ಮಾನವರೆಲ್ಲರೂ ಉದ್ಧಾರದ (ಆತ್ಮೋದ್ಧಾರದ) ಹಂತಗಳನ್ನು ದಾಟಲೇಬೇಕಿತ್ತು.

ಈಗ ಈ ಉದ್ಧಾರದ ಹಂತಗಳೇಕೆ ಎಂಬ ಪ್ರಶ್ನೆ. ವ್ಯಾವಹಾರಿಕ ಶಿಕ್ಷಣದಲ್ಲಿ ೧ನೇ ತರಗತಿಯ ವಿದ್ಯಾರ್ಥಿಯನ್ನು ಅವನ ಗುಣಕರ್ಮ ಯೋಗ್ಯತೆಗೆ ಅನುಸರಿಸಿ ಎರಡು ಅಥವಾ ಮೂರನೆ ತರಗತಿಗೆ ಏರಿಸಬಹುದೇ ಹೊರತು ಒಮ್ಮೆಲೇ ಹತ್ತನೇ ತರಗತಿಗೆ ಏರಿಸುವುದು

ಅಸಾಧ್ಯವೆಂದಾದಲ್ಲಿ ಧರ್ಮದ ಸೂಕ್ಷ್ಮತೆಯನ್ನು ಒಳಗೊಂಡಿರುವ ವರ್ಣಧರ್ಮದಲ್ಲಿ ಆತ್ಮೋದ್ಧಾರದ ಸೋಪಾನಗಳು ಅನಿವಾರ್ಯವಲ್ಲವೇ? ಇದಲ್ಲವೆ ಸಹಜಕ್ರಮ ?

ಇಷ್ಟಾಗ್ಯೂ ವರ್ಣಧರ್ಮದಲ್ಲಿ 'ಜಾತಿ' 'ಜಾತಿ'ಗಳ ಬಗ್ಗೆ, 'ಅಸ್ಪೃಶ್ಯತೆ'ಯ ಬಗ್ಗೆ ಯಾವುದೇ ನೇರ ಯಾ ಪರೋಕ್ಷ ಉಲ್ಲೇಖವಿಲ್ಲ. ಇದರ ವಿವರಣೆಯ ಎಡೆ, ಅವಕಾಶ, ಅಗತ್ಯಗಳ ಪ್ರಸಂಗಗಳೂ ಅಲ್ಲಿ ಇರಲಿಲ್ಲ. ಗುಣಕರ್ಮದಂತೆ ವರ್ಣ ನಿರ್ಧರವಾಗುತ್ತಿತ್ತು. ಗುಣಕರ್ಮಗಳು ಬದಲಾದಂತೆ ವರ್ಣವ್ಯತ್ಯಾಸ ತಂತಾನೆ ಆಗುತ್ತಿತ್ತು. ಇಂದು 'ಅಸ್ಪೃಶ್ಯತೆ'ಯ ವಿಕೃತಾರ್ಥದ ರೂಪ ನಮ್ಮ ಎದುರು ಇದೆ. ಇಂದು ಅಸ್ಪೃಶ್ಯರೆನಿಸಿಕೊಂಡವರು ಮಾತ್ರವಲ್ಲ, ಅಸ್ಪೃಶ್ಯರಲ್ಲವೆಂದೆನಿಸಿದವರೂ ಸಾಂಸ್ಕೃತಿಕ ಉತ್ಪಾತಕ್ಕೆ ಒಳಗಾಗುತ್ತಿದ್ದಾರೆ ಎಂಬುದು ಜೀವನ ಸತ್ಯ! ಖೇದದ ಸಂಗತಿಯೆಂದರೆ ಈ ಸಾಂಸ್ಕೃತಿಕ ವಿಮುಖತೆಯ ಬಗ್ಗೆ ಯಾರೂ ತಲೆಕೆಡಿಸಿ ಕೊಳ್ಳಲು ಸಿದ್ಧರಿಲ್ಲ. ಸಾಂಸ್ಕೃತಿಕ ಉತ್ಥಾನಕ್ಕೆ ಸುಯೋಗ್ಯವಾಗುಳ್ಳ ಆಂದೋಲನ ನಡೆಸಲು ಯಾರೂ ತಯಾರಿಲ್ಲ. ಬರಿಯ ಭಾಷಣ ಘೋಷಣೆ ಪ್ರಚಾರದಿಂದ ಈ ಕಾರ್ಯ ಸಾಧ್ಯವಾದೀತೇ? ಆಚಾರದ ಆದರ್ಶ ಬೇಡವೆ? ಆಚಾರದ ನಡೆ ಅನಗತ್ಯವೆ?

**ಜಾತಿ ಜಾತಿ ಒಡೆಯುವ ರೀತಿ:**

ಆತ್ಮಿಕ ಬೆಳವಣಿಗೆಯನ್ನು ಬದಿಗೆ ತಳ್ಳಿ ಆರ್ಥಿಕ ಬೆಳವಣಿಗೆಯ ಭ್ರಮೆಯಲ್ಲಿ ಜನಾಂಗವನ್ನು 'ಜಾತಿ-ಜಾತಿ'ಗಳಾಗಿ ಒಡೆದಾಗ ಅಸಂಖ್ಯ ಜಾತಿಯ ಸೃಷ್ಟಿಯಾದವು. ಈ ಜಾತಿ ಪದ್ಧತಿಯ ಬಗ್ಗೆ ಪರಕೀಯರು ದೊಡ್ಡ ಸ್ವರವೆಬ್ಬಿಸಿದರು. ಅಧಿಕಾರಿಗಳ ಸಂಚಿನಲ್ಲಿ ಅವರ ಲಹರಿಯಂತೆ ಕುಣಿದು ಬರೆದರು, ಚರಿತ್ರೆಕಾರರೂ ಕೂಡಾ. ಆಡಳಿತದಲ್ಲಿದ್ದವರು ಸಮಾಜವನ್ನು 'ಜಾತೀಯ ವರ್ಗೀಕರಣದಲ್ಲಿ ಒಡೆಯುವಲ್ಲಿ 'ಜಾತೀಯ ವಿರಸ'ವನ್ನು ತುಂಬುವಲ್ಲಿ ಯಶಸ್ಸನ್ನೂ ಸಂಪಾದಿಸಿದರು. ಇದು ಕಳೆದ ಕೆಲವು ಶತಮಾನಗಳ ಕಾಲದ ದುರಂತಪರ್ವ!

ಸತಾತನಧರ್ಮ ವರ್ಣ ಧರ್ಮ-ಎರಡೂ ಏಕಕಾಲದಲ್ಲಿ ಧಾಳಿಗೀಡಾದಾಗ ಎದ್ದು ಬಂದ ಸುಧಾರಕರ ಕತೆಯೇ ಇನ್ನೊಂದು ವಿಧ. ಮೂಲಭೂತ ಧರ್ಮದ ಅಭಿಪ್ರಾಯವನ್ನು ಅರಿತು ಅವರು ಅಡಿಯಿಡಬೇಕಿತ್ತು! ಸಾಂಸ್ಕೃತಿಕ ಮೂಲವನ್ನು ತಿಳಿದು ಜನಾಂಗದಲ್ಲಿ ಸನಾತನ ಸಂಸ್ಕೃತಿಯ ಪುನಸ್ಥಾಪನೆಗೆ ಬೇಕಾದ ಸಂಸ್ಕಾರಯುತ ಆಂದೋಲನವನ್ನು ಈ ಸುಧಾರಕರು ಕೈಗೆತ್ತಿಗೊಳ್ಳಬೇಕಾಗಿತ್ತು! ಬದಲಾಗಿ, ವಿಮುಖ ಸಮಾಜವನ್ನು ಬಹಿರ್ಮುಖಗೊಳಿಸುವಲ್ಲಿಯೇ ಇವರಲ್ಲಿ ಹೆಚ್ಚಿನವರ ಸೇವೆ ಸಂದಿತು. ಈ ಸೇವೆ ನಗಣ್ಯವೆಂದೇನೂ ನಿರ್ಣಯವಲ್ಲ. ಆದರೆ ಪರಿಣಾಮವೇನಾಗಿದೆ ಎಂಬುದನ್ನು ಇಂದು ವಿವೇಚಿಸದೆ ಗತ್ಯಂತರವಿಲ್ಲ.

ವರ್ಣಧರ್ಮವನ್ನು ಪುನಸ್ಥಾಪಿಸಬೇಕಿತ್ತು; ಬದಲಾಗಿ 'ಜಾತಿಪದ್ಧತಿ'ಗೇ ಪ್ರೋತ್ಸಾಹಕವಾಗಿ ನಿಂತು 'ಜಾತಿಗಳ ಉದ್ಧಾರ'ಗಳನ್ನು ಕೈಗೆತ್ತಿಕೊಂಡರು. ಅಂದು ಅದು 'ಸುಧಾರಣೆ'ಯಾಗಿ ಕಂಡದ್ದು ಇಂದು ಅಸಹ್ಯ "ಧಾರಣೆ"ಯಾಗಿ ಜನಾಂಗವನ್ನೇ ಸಂಸ್ಕೃತಿಹೀನ ಹಂತಕ್ಕೆ ತಳ್ಳುತ್ತಿರುವುದು ಹೆಚ್ಚು ಹೆಚ್ಚು ವಿದಿತವಾಗುತ್ತಿದೆ. ಸನಾತನ ಧರ್ಮವನ್ನು ಮೇಲೆತ್ತಬೇಕಾಗಿದ್ದ "ಸುಧಾರಕ"ರು "ಹಿಂದೂ ಧರ್ಮ"ದ ಉದ್ಧಾರವೆನ್ನುತ್ತಾ ಸಾಗಿಬಂದರು,

ಪರಿಣಾಮ:- ಸಂಘರ್ಷದ ಪರಾಕಾಷ್ಠೆಯಲ್ಲಿ ಜನಾಂಗ ಇಂದು ತತ್ತರಿಸುತ್ತಿದೆ. ಅಂದರೆ ಇವರೆಲ್ಲರಿಂದ ಸಂದದ್ದು ಉರಿವ ಬೆಂಕಿಗೆ ತುಪ್ಪಸೇವೆ! ಪರಿಣಾಮದಿಂದ ನೋಡೋಣ. "ಅಸ್ಪೃಶ್ಯತೆ"ಯು ಇಂದಿನ ವಿರಾಡ್ರೂಪ ! ಜಾತಿ ಸಂಘರ್ಷದ ಕರಾಳ ಮುಖ! ಪ್ರಪಾತಸದೃಶ ಸಾಂಸ್ಕೃತಿಕ ಉತ್ಪಾತ! ಅರ್ಥ ಕೇಂದ್ರವಾಗುಳ್ಳ ಜೀವನ, ಧರ್ಮ; ಮನೆಮಠ; ಮಠ ಮಂದಿರಗಳು! ಡಾಂಭಿಕತನ, ಪ್ರಚಾರಗಳ ವಿಕಟನರ್ತನ!

**ಸಮಸ್ಯೆಯ ಸಂವಾಹಕರು:**

ಈ ಎಲ್ಲ ಸಮಸ್ಯೆಗಳ ಸಂವಾಹಕರ ಸಾಲು ಸುದೀರ್ಘವೆಂದರೂ ಸರಿ. ಸ್ವಾತಂತ್ರ್ಯ ಹೋರಾಟದಲ್ಲಿ ಸೇರಿಕೊಂಡವರಲ್ಲಿ ಕೆಲವರಂತೂ "ಜಾತಿಜಾತಿ"ಗಳಲ್ಲಿ ಗಾಳಿ ತುಂಬಿದರು. ಪರಕೀಯರು "ಅಸ್ಪೃಶ್ಯ"ರನ್ನು ಪಟ್ಟಿಹಾಕಿ ತೋರಿದರೆ, ಅದು ಹೌದೆಂಬಂತೆ ಅವರನ್ನು ಒಂದು ಬೇರೆಯೇ ಗುಂಪಾಗಿ ಕಂಡರು ಕೆಲವರು. ಇದಕ್ಕೂ ಕಾರಣವಿಲ್ಲದಿಲ್ಲ, ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದವರಲ್ಲೂ ಹೆಚ್ಚಿನವರು ಪಾಶ್ಚಾತ್ಯ ಶಿಕ್ಷಣ ಕ್ರಮದಿಂದಲೇ ಪ್ರೇರಿತರಾದವರು ! ಪ್ರಕೃತಿ ಸಂಬಂಧಿಯಾಗುಳ್ಳ ಸನಾತನ ಧರ್ಮಕ್ಕೆ ವಿರುದ್ಧವಾದ ಹಾಗೂ ಪ್ರಕೃತಿ ವಿರೋಧಿಯಾದ (ಪ್ರಕೃತಿಯನ್ನು ಗೆಲ್ಲ ಹೊರಟ) ವೈಜ್ಞಾನಿಕ ಅನುಸಂಧಾನ ಮಾರ್ಗಗಳನ್ನು ಅನುಸರಿಸುವಲ್ಲಿ ಪಾಶ್ಚಾತ್ಯ ಶಿಕ್ಷಣಕ್ರಮವೇ ಸುಯೋಗ್ಯವೆಂದು ಕಂಡು, ತತ್ಪ್ರೇರಣೆಯಿಂದಾಗಿ ಭಾರತೀಯತೆಯಲ್ಲಿ ದೋಷವನ್ನೇ ಕಂಡು ಕರುಬಿದವರು ಕೆಲವರು! ಕರುಬಿಕೊಂಡು ದೋಷವನ್ನು ವೃದ್ಧಿಸಿದರೇ ಹೊರತು ದೋಷ ನಿವಾರಣೆ ಮಾಡಲಾಗದವರು ಹಲವರು! ಇವರಿಂದಲೂ ಸಮಸ್ಯೆಗಳ ಬೆಳವಣಿಗೆಗೆ ಆಹಾರ ಹೇರಳವಾಗಿ ದೊರಕಿತ್ತು— ಮೂಲತಃ ದೇಶ, ಸಮಾಜವನ್ನು ವಿಘಟನೆಗೆ ತಳ್ಳುವಲ್ಲಿ!

ಇವರೊಂದಿಗೆ ಸೇರಿಕೊಂಡ ಇನ್ನೊಂದು ಗುಂಪು ತಮ್ಮನ್ನು 'ಸಮನ್ವಯವಾದಿ' ಗಳೆಂದು ಕರೆದುಕೊಂಡವರದು. 19ನೇ ಶತಮಾನದ ಪುನರುತ್ಥಾನವಾದಿಗಳೆನಿಸಿಕೊಂಡಿದ್ದ ಇವರಿಂದಲೇ ಅನೇಕ 'ಸುಧಾರಕ'ರೂ ಆಗಿಹೋಗಿದ್ದಾರೆ. ಇವರೆಲ್ಲರಿಗೂ, ತಾವು ಸನಾತನ ಧರ್ಮದ ಪ್ರಾತಿನಿಧಿಕ ಪ್ರಜೆಗಳೆಂದು ಭಾವಿಸಿಕೊಂಡು ಪಾಶ್ಚಾತ್ಯರಿಗೆ ತಮ್ಮ ಧರ್ಮದ ಔಚಿತ್ಯವನ್ನು ತೋರಿಸಿಕೊಡಬೇಕೆಂಬ 'ತುರಿಕೆ' ಒಂದೆಡೆಯಾದರೆ, ಆ ಪಾಶ್ಚಾತ್ಯ ದೊರೆ ಗಳಿಂದ 'ಸರ್‌ಹುಡ್' 'ನೈಟ್‌ಹುಡ್' ಮುಂತಾದ ಬಿರುದುಗಳನ್ನು ಗಿಟ್ಟಿಸಿಕೊಂಡು ತಾವು 'elites'–ಬುದ್ಧಿಜೀವಿಗಳೆಂದು ಕರೆಸಿಕೊಳ್ಳುವ 'ಬಯಕೆ' ಇನ್ನೊಂದೆಡೆ! ಈ ತೊಳಲಾಟ ದಲ್ಲಿ ಇವರು ಬೆಳೆಸಿದ 'ದ್ವಂದ್ವವೃಕ್ಷ'ದ ಬೇರು ಇಂದಿನ ಜನಾಂಗದಲ್ಲಿ ಬೃಹತ್‌ಗಾತ್ರದ 'ದ್ವಂದ್ವವೃಕ್ಷ'ವನ್ನು ಬೆಳೆಸಿದ್ದು ಮಾತ್ರವಲ್ಲ, ಪರೋಕ್ಷವಾಗಿ "ಅಸ್ಪೃಶ್ಯತೆ"ಯಂಥ ಇತರ ಅನೇಕ ಸಮಸ್ಯೆಗಳ ಸಂವಹನಕ್ಕೆ ಶತಮಾನದಂತರದ ಸೇತುವೆಯನ್ನೇ ಬಂಧಿಸಿರುವರು. ಯಾರಿಗೂ ಎಂದಿಗೂ ಸಾಂಸ್ಕೃತಿಕ ಉತ್ಪಾತದ ಕಡೆಗೆ ಲಕ್ಷ್ಯವೇ ಬಾರದಂಥ ಒಂದು ವಿಸ್ಮೃತಿಯನ್ನು ಇದು ಉಂಟುಮಾಡಿತ್ತು; ಹಿಪಾಕ್ರಸಿಯ ಬೃಹತ್ ವೃಕ್ಷವಿಂದು ಸಮಾಜವ್ಯಾಪಿ ಬೆಳೆದು ನಿಂತಿದೆ!

ಅರಿಸ್ಟಾಟಲ್‌ನಿಂದ ಹಿಡಿದು ನೀಷೆಯ ವರೆಗೂ ದೂಷಿಸಲ್ಪಟ್ಟಂಥ (ಮೆಕಿಯಾ ವೆಲ್ಲಿಯ 'ದಿ ಪ್ರಿನ್ಸ್' ಕೂಡಾ) 'ಪ್ರಜಾಪ್ರಭುತ್ವ' ಎಂಬ ಆಡಳಿತ ವ್ಯವಸ್ಥೆಯನ್ನು ಈ ಜನಾಂಗದಲ್ಲಿ ಬೇರುಬಿಡಿಸುವುದರಿಂದ ಮಾತ್ರವೇ ತಮ್ಮ ವಿಶ್ವವ್ಯಾಪೀ ಮತಾಂತರದ ಉದ್ದೇಶ

ವನ್ನು ಪೂರೈಸಬಹುದೆಂದು ಮುನಗಂಡ ಮತಪ್ರಚಾರಕರು ಇದೇ ಸುಸಮಯವನ್ನು ವಿಭಜನೆಗೆ ಬಳಸಿಕೊಂಡರು; ಇಲ್ಲಿನ ಸಂಘರ್ಷಕ್ಕೆ ಹೆಚ್ಚಿನ ಸಂಚಾಲನೆಯನ್ನು ನೀಡಿದರು. ಜತೆಗೆ ತಮ್ಮದೇ ಆದ ಶೈಲಿಯ ವಿಷಮ ಶಿಕ್ಷಣ ಕ್ರಮವನ್ನು ಪ್ರಚಾರಕ್ಕೆ ತಂದುದಲ್ಲದೇ ಸಂಸ್ಕೃತಿ ಪರವಾಗಿದ್ದ ಇಲ್ಲಿನ ಶಿಕ್ಷಣಕ್ರಮದ ಮೂಲೋತ್ಪಾಟನ ಮಾಡಿದರು. ಜನಾಂಗವೇ ವಿಸ್ಮೃತಿಯಲ್ಲಿ ಬಿದ್ದರೂ ಯಾರಿಗೂ ಸಾಂಸ್ಕೃತಿಕ ಬೇರುಗಳನ್ನು ಸನಾತನ ಧರ್ಮದ ನೆಲೆಯಲ್ಲಿ ಮತ್ತೊಮ್ಮೆ ರೂಢವಾಗಿಸುವ ಸಾಮರ್ಥ್ಯ ಇಲ್ಲವಾಯಿತು.

ಬದಲಾಗಿ, ಇಲ್ಲಿಯೂ ಮತ–ಮತಗಳೊಳಗೆ ಸಂಘರ್ಷಕ್ಕೆ ಹೆಚ್ಚಿನ ಪ್ರೋತ್ಸಾಹ ದೊರಕಿತು. ರಾಜಾಧಿಕಾರಿಗಳನ್ನು ಬಳಸಿಕೊಂಡು ಮತಾಚಾರ್ಯರೊಳಗಿನ ಸಂಘರ್ಷ ತಂತಮ್ಮ ಮತಗಳ ಬಣಗಳನ್ನು ಬಲಗೊಳಿಸುವ ಪೈಪೋಟಿಯೇ ಮೆರೆಯಿತು. ಇದರಿಂದಾಗಿ 'ಸನಾತನ ಧರ್ಮ'ದ ಜಾಗವನ್ನು 'ಮತ'ಗಳು ಆಕ್ರಮಿಸಿದವು. 'ಜಾತಿಜಾತಿ'ಯ ಸಂಘರ್ಷದ ಜತೆಗೆ ಮತ ಮತಗಳೊಳಗಿನ ಶೀತಲ ಸಮರ ಪ್ರತ್ಯೇಕತೆಯನ್ನೇ ಪ್ರೋತ್ಸಾಹಿಸಿದ ಕಾರಣ ಪರಕೀಯ ಷಡ್ಯಂತ್ರಗಳಿಗೆಲ್ಲಾ ಮುಕ್ತ ಅವಕಾಶಗಳು ವರ್ಧಿಸಿದವು. ಮಾನವಿಕ "ಧಾರ್ಮಿಕ ಪ್ರಜ್ಞೆ"ಯ ಸಂಪೂರ್ಣ ಪತನವಾಗಿ ಕೇವಲ ಪಾಶವೀ "ಮತೀಯ ಭಾವನೆ"ಯೇ ಬೆಳೆಯುತ್ತಾ ಬಂದು ಇಂದಿನ ಅವ್ಯವಸ್ಥೆಯ ಹಂತವನ್ನು ತಲುಪಿದೆ.

ಮತೀಯ ಕೇಂದ್ರಗಳು ಆಡಳಿತಾಧಿಕಾರಿಗಳ ಸೂತ್ರಧಾರಿಗಳ ಕೈಗೊಂಬೆಗಳಾದವು. ಮತಪೀಠದ ಅಧಿಪತಿಗಳು, ಆಚಾರ್ಯರುಗಳು ಬಲವರ್ಧನೆಯ ಕಾರ್ಯದಲ್ಲಿ ರಾಜರುಗಳ ಆಶ್ರಯವನ್ನು ಪಡೆದುದರ ಕಾರಣ ಪರೋಕ್ಷವಾಗಿ ವಿಘಟನೆಗೇ ಹೆಚ್ಚಿನ ಬಲ ದೊರಕಿತು. ರಾಜರುಗಳೊಳಗೂ ಜಾತೀಯ ವೈಷಮ್ಯ ವೈಮನಸ್ಸುಗಳೇ ಬೆಳೆಯುತ್ತಿದ್ದ ಕಾರಣ ಇದು ಇನ್ನಷ್ಟು ಸರಳವಾಯಿತು. ಸಂಸ್ಕೃತಿಯನ್ನು ಪೋಷಿಸಬೇಕಾಗಿದ್ದ ಧಾರ್ಮಿಕ ಕೇಂದ್ರಗಳು ಮತೀಯ ಕೇಂದ್ರಗಳಾಗಿಯೋ, ವ್ಯಾಪಾರಕೇಂದ್ರಗಳಾಗಿಯೋ ಪರಿವರ್ತನೆಯಾಗುತ್ತಿರುವ ಈ ಸಂಧಿಕಾಲದಲ್ಲಿ ಸಾಂಸ್ಕೃತಿಕ ಉತ್ಪಾತಕ್ಕೆ ಎಡೆಯಾದುದಷ್ಟೇ ಅಲ್ಲ, ಮತೀಯ ಕೇಂದ್ರಗಳು ಸಂಸ್ಕೃತಿಹೀನಗೊಳ್ಳುತ್ತಾ ಸಾಗಿ ತಮ್ಮ ಅನುಯಾಯಿಗಳ ಮೇಲಿರಿಸಿಕೊಂಡ ನಿಯಂತ್ರಣವೂ ಸಡಿಲಾಗುತ್ತಾ ಬಂದು ಇಂದಿನ ಸ್ಥಿತಿಯಲ್ಲಿ 'ಸಂಸ್ಕರಣ' ಕ್ರಿಯೆಗೆ ಯಾರು ನೇತಾರರು ಎಂಬ ಬೃಹತ್ ಪ್ರಶ್ನೆ ಉಳಿಯುವಂತಾಯಿತು. ಅಂದರೆ, ಇಂದಿನ ಮತಾಚಾರ್ಯರುಗಳೂ 'ಜಾತಿ'ಯ ಬೆಳವಣಿಗೆಗೆ, ಅಸ್ಪೃಶ್ಯತೆಯ ಸಮಸ್ಯೆಗೆ, ಸಾಂಸ್ಕೃತಿಕ ಉತ್ಪಾತಕ್ಕೆ ಕೆಲವೊಮ್ಮೆ ಪ್ರತ್ಯಕ್ಷವಾಗಿಯೂ ಕೆಲವೊಮ್ಮೆ ಪರೋಕ್ಷವಾಗಿಯೂ ಸಂವಾಹಕರೇ ಅಲ್ಲವೆ?

ಧಾರ್ಮಿಕ, ಸಾಮಾಜಿಕ, ಆರ್ಥಿಕ ಸಂಘರ್ಷಗಳ ನಡುವೆ ಪ್ರವೇಶಿಸಿದ, ಹಾಗೂ ಪ್ರಕೃತಿವಿರೋಧಿಯಾಗಿ ಬೆಳೆದು ಬಂದ ಅಪರಂಪಾರ ವೈಜ್ಞಾನಿಕ ಸಂಶೋಧನೆಗಳು ಅಳಿದುಳಿದ ಧಾರ್ಮಿಕ ಚೈತನ್ಯವನ್ನೂ ಅಲುಗಾಡಿಸಿದವು. ಈ ವರೆಗೆ ಆದ ಪರಿವರ್ತನೆಗಳೆಲ್ಲವೂ ಸರಿಯಾದವುಗಳೆಂಬ ಭ್ರಮೆಗೆ ಈ ವೈಜ್ಞಾನಿಕ ಶೋಧನೆಗಳು ಇಂಬು ನೀಡಿದವು. ಇದೀಗ ಶಿಥಿಲ ಧರ್ಮದ ಅಲ್ಲಿ ಇಲ್ಲಿನ ಎಳೆಗಳು ಆದು ಹೇಗೆ ಸುಭದ್ರ ಸಮಾಜದ ವಸನವನ್ನು ನೇಯ್ದಾವು ಎಂಬುದು ಬರಿಯ ವಿಭ್ರಾಂತಿಯ ಊಹೆಗೆ ಬಿಟ್ಟಿದೆ !!

ನಾವಿಂದು ಯಾವೆಲ್ಲಾ ವ್ಯವಸ್ಥೆಗಳಲ್ಲಿ ಆಶಾವಾದವನ್ನಿರಿಸಿಕೊಂಡಿದ್ದೇವೋ ಆ ಎಲ್ಲಾ ವ್ಯವಸ್ಥೆಗಳೂ ಗಮಿಸುವ ವೇಗ, ತೀವ್ರತೆ, ಮಾರ್ಗ ಎಲ್ಲವೂ ನಮಗೆ ನಿರಾಶೆಯನ್ನು ಹುಟ್ಟಿಸುತ್ತಿವೆ. ಇಂಥ ವಿರೋಧಭಾಸಕರ ವಿದ್ಯಮಾನದಲ್ಲಿ 'ಸಂಸ್ಕೃತಿಗಾಗಿ ಬದುಕು'

'ಬದುಕಿಗಾಗಿ ಸಂಸ್ಕೃತಿ'–ಇವೆರಡರಲ್ಲಿ ಯಾವುದು ಹೆಚ್ಚು ಪ್ರಶಸ್ತ ಎಂಬುದರ ನಿರ್ಣಯವಾಗ ಬೇಕಾಗಿದೆ. ಬದುಕು ಸುಸಂಸ್ಕೃತವಾಗಿರಬೇಕೆಂದಾದಲ್ಲಿ ಆ ಸಂಸ್ಕೃತಿ ಬಾರಿಸುತ್ತಿರುವ ಕಾಲದ ಗಂಟೆಯನ್ನು 'ಅಸ್ಪೃಶ್ಯತೆ'ಯ ಸಮಸ್ಯೆಯಲ್ಲಿ, 'ಮತಾಂತರ'ದ ಸಮಸ್ಯೆಯಲ್ಲಿ, ನೈತಿ ಸಾಂಸ್ಕೃತಿಕ ಪತನ–ಉತ್ಪಾತದ ಸಮಸ್ಯೆಯಲ್ಲಿ ನಾವಿಂದು ಸರಿಯಾಗಿ ಕೇಳಿಸಿಕೊಳ್ಳಬೇಕು ಕಾಲ ಯಾವಾಗಲೂ ಈ ಗಂಟೆಯನ್ನು ಬಾರಿಸಲಾರದು. ಬಾರಿಸಿದಾಗ ಕಿವಿ ಇದ್ದವರು ಅದಕ್ಕೆ ಕಿವಿಗೊಡುವುದು ಕರ್ತವ್ಯ !

**ಯೋಜಿತ ಫಲ ಅಯಾಚಿತ ಸಮಸ್ಯೆ:—**

ನಮಗೆ ಇದು ಅಯಾಚಿತ ಸಮಸ್ಯೆ. ಆದರೆ, ಶತಮಾನಗಳಿಂದ ಸಾಂಸ್ಕೃತಿಕ ಶೈಥಿಲ್ಯಕ್ಕಾಗಿ ಹೆಣಗಾಡುತ್ತಿರುವವರಿಗೆ ಇದು ಯೋಜಿತಫಲವನ್ನು ನೀಡಿದೆ. ಇಂದಿಗೂ ಇದರ ಸ್ವಲಾಭವನ್ನು ಸುಸೂತ್ರವಾಗಿ ಪಡೆಯುತ್ತಿರುವ ವಿದ್ರೋಹಿಗಳೂ ಇಲ್ಲದಿಲ್ಲ.

ನಾವು ಈ ವರೆಗೆ ಅವಲೋಕಿಸಿದ ನಿಟ್ಟಿನಲ್ಲಿ ಎಲ್ಲವೂ ಸಂಘರ್ಷಕ್ಕೆ, ವಿಘಟನೆಗೆ ಪೂರಕ. ಅಂದರೆ, ಎಲ್ಲಾ ರಚನಾತ್ಮಕ ಕಾರ್ಯಗಳು ನಡೆದಿಲ್ಲವೇ ಎಂದು ಪ್ರಶ್ನೆ ಏಳಬಹುದು. ಆದರೆ ಅಂಥ ಕಾರ್ಯಗಳೆಲ್ಲವೂ ತಾತ್ಕಾಲಿಕ ಆಯುಃಕಾಲವನ್ನೇ ಪಡೆದಿದ್ದವು; ಇವುಗಳ ಹಿಂದೆ ಶಿಥಿಲಾತ್ ಶಿಥಿಲ ಮಟ್ಟಕ್ಕೆ ಇಳಿಯುತ್ತಾ ಸಾಗಿದ್ದನ್ನು ಇತಿಹಾಸ ಗುರುತಿಸಿ ತೋರುತ್ತದೆ. ಇಲ್ಲಿಂದಲೇ ಪ್ರಾರಂಭವಾಗಿರುವುದು ಫಲಕಗಳ ಪಟ್ಟಿ—'ವರ್ಗಭೇದ', 'ಜಾತೀಯತೆ', 'ಹರಿ ಜನರು', 'ಸವರ್ಣೀಯರು', 'ಅಲ್ಪ ಸಂಖ್ಯಾತರು', 'ಬಹು ಸಂಖ್ಯಾತರು', 'ಹಿಂದೂ', 'ಜಾತ್ಯತೀತತೆ' ಇತ್ಯಾದಿ ಹೆಸರುಗಳ ಫಲಕಗಳು. ಇವುಗಳನ್ನು ಯಾರೇ ದಾನ ಮಾಡಿರಲಿ— ಇವೆಲ್ಲವನ್ನೂ ಸತ್ಪಾತ್ರರಂತೆ ನಮ್ಮ ತಲೆಗೆ ಅಂಟಿಸಿಕೊಂಡೇ ಬಂದಿದ್ದೇವೆ. ದೇಶೀಯ ಕಣ್ಣಲ್ಲೇ ಎಲ್ಲವನ್ನೂ ನೋಡುವವರೆಂದು ಹೇಳಿಕೊಳ್ಳುವವರೂ ಇದಕ್ಕೇನೂ ಅಪವಾದವಲ್ಲ. ಅಂತೂ ಸನಾತನ ಧರ್ಮದಲ್ಲಿ ಹೇಳಿದ ಸಂಸ್ಕೃತಿಯನ್ನು ಮೇಲಕ್ಕೆತ್ತುವಲ್ಲಿ ನಮ್ಮ ಸ್ವಾರ್ಥಕ್ಕೆ ಅಡ್ಡಿಯಾಗಬಾರದೆಂಬ ಜಾಗ್ರತೆಯೂ ಜಾಗೃತಿಯೂ ಎಲ್ಲರಲ್ಲೂ ಇರುವಂತೆ ಭಾಸವಾಗು ತ್ತದೆ. ಈ ಮಣ್ಣಿನ ಕಣಕಣವೂ ಮೂರ್ತವಾಗುವುದು ಅಶಕ್ಯವೇ ಎನಿಸುವಷ್ಟರ ವರೆಗೆ ಆರ್ಥಿಕಪ್ರಜ್ಞೆಯೂ ಸ್ವಾರ್ಥದ ಸ್ವೋಪಜ್ಞತೆಯೂ ನಮ್ಮಲ್ಲಿ ಬೆಳೆದು ನಿಂತಿದೆ. ಇವುಗಳೆಡೆ ಯಿಂದ ಸಮಸ್ಯೆಗೆ ಪರಿಹಾರದ ಉದ್ಭವಕ್ಕಾಗಿ ಕಾಯಬೇಕು! ಈ ಮಧ್ಯೆಯೂ ಸನಾತನ ಧರ್ಮದ ಕೆಲವೊಂದು ತತ್ವಗಳು ಉಳಿದುಕೊಂಡು ಎಲ್ಲವೂ ಕಲಸುಮೇಲೋಗರ !

'ಹಿಂದೂ' ಫಲಕವನ್ನು ಸನಾತನ ಧರ್ಮಕ್ಕೆ ನೀಡಿದ ಕುಹಕಿಗಳೇ ವರ್ಣಧರ್ಮಕ್ಕೆ 'ಜಾತಿ'ಯ ಫಲಕವನ್ನು ನೀಡಿ ಜನಾಂಗವನ್ನು ವಿಘಟನೆಗೆ ತಳ್ಳಿದರು. 'ಅಸ್ಪೃಶ್ಯತೆ'ಯೂ ಇವರದೇ ಕೊಡುಗೆ. ಇವರ ಷಡ್ಯಂತ್ರದ ಫಲ—ಸಾರ್ವತ್ರಿಕವಾದ ಸಾಂಸ್ಕೃತಿಕ ಉತ್ಪಾತ; ಅಸ್ಪೃಶ್ಯರೆನಿಸಿಕೊಂಡವರ ಸಾಮೂಹಿಕ ಮತಾಂತರದ ದೈತ್ಯ ಸಮಸ್ಯೆ! ಈ ಜನಾಂಗದ ಸಂಘರ್ಷದಲ್ಲಿ ಕುಹಕಿಗಳಿಗೆ ಯೋಜಿತಫಲ ಕಂಡುಬಂದಿದೆ. ನಮಗೋ ಇದು ಅಯಾಚಿತ ಸಮಸ್ಯೆಯಾಗಿ ಪರಿಣಮಿಸಿದೆ! ಈಗಲಾದರೂ ಸಾಂಸ್ಕೃತಿಕ ಉತ್ಪಾತವಾಗುತ್ತಿರುವುದರ ಬಗ್ಗೆ ಎಚ್ಚರಮಾಡುವುದು ಬೇಡವೆ? ನಾವಿನ್ನೂ ಮತಾಂತರದಲ್ಲಿ ಇರುವ ಸಂಖ್ಯೆಯ ಬಗ್ಗೆಯೇ ಚಿಂತಿತರಾಗಿದ್ದೇವೆಯೇ ಹೊರತು ಸಾಂಸ್ಕೃತಿಕ ಉತ್ಪಾತಗಳ ಕುರಿತು ಆಳ ಚಿಂತನೆಗೆ ತೊಡ ಗಿಲ್ಲವೇ—ಎಂದು ಅನಿಸುವಂತಾಗುತ್ತದೆ.

[ಸಶೇಷ]

# ಚರೈವೇತಿ ಚರೈವೇತಿ

● ಪ್ರೊ|| ಸುರೇಶಚಂದ್ರ

ಜಗತ್ತಿನಲ್ಲಿ ಆಲಸಿಗಳೂ, ನಿರ್ಬಲರೂ ಆದವರು ಯಾವುದೇ ರೀತಿಯ ಉನ್ನತಿಯನ್ನು ಹೊಂದಲಾರರು. ಯಾವ ವ್ಯಕ್ತಿಯು ದುರ್ಬಲನೂ, ಆಲಸಿಯೂ, ವ್ಯೈಗಳ್ಳ ಹಾಗೂ ಪ್ರಮಾದಿಯಾಗಿರುತ್ತಾನೋ ಅವನು ಸದಾ ದೀನ, ಹೀನ ಮತ್ತು ದರಿದ್ರನಾಗುತ್ತಾನೆ. ಎಲ್ಲಾ ರೀತಿಯ ಐಶ್ವರ್ಯ ಹಾಗೂ ಯಶಸ್ಸುಗಳನ್ನು, ಕರ್ತವ್ಯ ಕರ್ಮಗಳಲ್ಲಿ ಸದಾ ಮುಂದಿರುವವರೇ ಪಡೆಯುತ್ತಾರೆ. ಯಾವನು ಸದಾ ವಿಚಾರಶೀಲನೂ, ಜಾಗರೂಕನೂ ಆಗಿರುತ್ತಾನೋ ಅವನು ಸೂಕ್ತ ಸಮಯದಲ್ಲಿ, ಸದವಕಾಶ ಸಿಕ್ಕಿದಾಗ ಅದರ ಲಾಭ ಪಡೆಯುತ್ತಾನೆ. ಮುಂದುವರಿಯಲು ಸ್ವಾವಲಂಬನೆಯು ಅಗತ್ಯ ಬಹಳವಿದೆ. ಬೇರೊಬ್ಬರ ಆಶ್ರಯದಲ್ಲಿರುವವನು, ಇನ್ನೊಬ್ಬರ ಅವಲಂಬನೆಗಾಗಿ ಎಡೆತಾಕುವವನಿಗೆ ಉತ್ಸಾಹವಾಗಲಿ, ಸಾಹಸವಾಗಲಿ ಇರುವುದಿಲ್ಲ. ಆದ್ದರಿಂದ ಜ್ಞಾನದೊಂದಿಗೆ ಪರಿಶ್ರಮವನ್ನು ಎಂದಿಗೂ ಕೈ ಬಿಡಬಾರದು. ವಿದುರ ನೀತಿಯಲ್ಲಿ ಸಫಲ ಜೀವನದ ಪ್ರಾಪ್ತಿಗೆ ಬೇಕಾದ ವಸ್ತುಗಳನ್ನು ಈ ರೀತಿ ವರ್ಣಿಸಿದೆ:-

ಉದ್ಯಮಃ ಸಾಹಸಂ ಧೈರ್ಯಂ ಬುದ್ಧಿ ಶಕ್ತಿಃ ಪರಾಕ್ರಮಃ ।
ಷಡೇತೇ ಯತ್ರ ತಿಷ್ಠಂತಿ ತತ್ರ ದೇವೋ ಸಹಾಯಕೃತ್ ॥

"ಉದ್ಯಮ, ಸಾಹಸ, ಧೈರ್ಯ, ಬುದ್ಧಿ, ಶಕ್ತಿ ಮತ್ತು ಪರಾಕ್ರಮ — ಈ ಐದು ಗುಣಗಳಿರುವಲ್ಲಿ ದೈವಸಹಾಯವೂ ಇರುತ್ತದೆ.

ಒಂದು ಕಥೆ ಕೇಳಿರಿ. ಓರ್ವ ವ್ಯಕ್ತಿ ತುಂಬಾ ದಟ್ಟ ದರಿದ್ರನಾಗಿದ್ದನು. ಸಂಸಾರ ಮಾತ್ರ ದೊಡ್ಡದು. ತಿನ್ನಲು, ಕುಡಿಯಲು, ಉಡಲು, ತೊಡಲು ತುಂಬಾ ಕಷ್ಟವಾಗಿತ್ತು. ಕಷ್ಟಗಳು ತೀವ್ರವಾದಾಗ, ಬೇರೊಂದು ಕಡೆ ಹೋಗಿ ವ್ಯಾಪಾರವನ್ನಾಗಲಿ, ನೌಕರಿಯನ್ನಾಗಲಿ ಮಾಡಿ ಜೀವನ ಯಾಪನೆ ಮಾಡಬೇಕೆಂದೆಣಿಸಿಕೊಂಡು ನಿಶ್ಚಯಿಸಿ. ತನ್ನ ಪರಿವಾರದೊಡಗೂಡಿ ಒಂದು ದಿನ ಹೊರಟನು. ದಾರಿಯಲ್ಲಿ ಕತ್ತಲಾಯಿತು. ಒಂದು ವೃಕ್ಷದಡಿಯಲ್ಲಿ ಅಂದು ಬೀಡುಬಿಟ್ಟರು. ತಂದೆಯು ಹಿರಿಯ ಮಗನನ್ನು ಕರೆದು — "ಮಗನೇ, ಕಾಡಿನೊಳಕ್ಕೆ ಹೋಗಿ ಸ್ವಲ್ಪ ಸೌದೆಯನ್ನು ತೆಗೆದುಕೊಂಡು ಬಾ. ಒಲೆ ಹಚ್ಚಲಿಕ್ಕೆ ಬೇಕಷ್ಟೆ!"

ಹಿರಿಯ ಮಗನು ಇನ್ನೇನು ಹೊರಡುವುದರಲ್ಲಿದ್ದನು. ಆಗ ಚಿಕ್ಕ ಮಗನು "ಅಪ್ಪಾ! ಅಣ್ಣ ಏಕೆ? ನಾನೇ ಹೋಗಿ ತರುತ್ತೇನೆ". ಅವನು ಹೊರಡುವುದರಲ್ಲಿದ್ದಾಗ ಇನ್ನೊಬ್ಬನು "ಅವರು ಬೇಡ, ನಾನು ತರುತ್ತೇನೆ" — ಎಂದು ಎದ್ದು ನಿಂತನು. ತಂದೆಯು "ಆಗಲಿ ಮಕ್ಕಳೇ, ಈಗ ಎಲ್ಲರೂ ಒಂದೊಂದು ಕೆಲಸ ಮಾಡೋಣ. ಒಬ್ಬನು ಕಟ್ಟಿಗೆ ತರಲಿ, ಮಗುದೊಬ್ಬನು ನೀರು, ಇನ್ನೊಬ್ಬನು ಒಲೆಗೆ ಕಲ್ಲುಗಳು — ಹೀಗೆ ತರಲಿ" ಎಂದನು.

ಸ್ವಲ್ಪ ಹೊತ್ತಿನಲ್ಲಿಯೇ ಕಟ್ಟಿಗೆ, ನೀರು, ಕಲ್ಲುಗಳು ಎಲ್ಲಾ ಬಂದವು, ಒಲೆ ಉರಿಯತೊಡಗಿತು. ಎಲ್ಲಾ ಆಗುತ್ತಿದ್ದಂತೆ ಆ ಮರದ ಮೇಲಿದ್ದ ಪಕ್ಷಿಯೊಂದು ನಕ್ಕು

## ಆದರಣೀಯ ವೇದಾಭಿಮಾನಿಗಳಲ್ಲಿ ವಿನಂತಿ

೧೯೮೨ನೇ ಜನವರಿಯಲ್ಲಿ ನಡೆದ ವಾಹನಾಪಘಾತದಿಂದಾಗಿ 'ವೇದ ಪ್ರಕಾಶ'ಕ್ಕೆ ಬಂದೊದಗಿದ ಸಂಕಷ್ಟಗಳು.

| | | |
|---|---|---|
| ೧. | ಪ್ರಚಾರ ಸಂಬಂಧೀ ವಾಹನ (ವ್ಯಾನ್) ನುಚ್ಚುನೂರಾಗಿ ಆದ ಆರ್ಥಿಕ ಹಾನಿ | 50,000-00 |
| ೨. | 'ಋಗ್ವೇದ ದರ್ಶನ'ದೊಡನೆ ಋಗ್ವೇದ ಮಂತ್ರಗಳ ವರ್ಣಾನುಕ್ರಮಸೂಚಿಯನ್ನು ಧರ್ಮಾರ್ಥವಾಗಿ ಕೊಡುತ್ತಿರುವುದರಿಂದ ಆದ ಒಟ್ಟು ನಷ್ಟ 30,000-00ದಲ್ಲಿ ದಾನದ ಮೂಲಕ ಲಭ್ಯವಾದುದು ಕೇವಲ 2,025-00 ಉಳಿದುದು | 27,975-00 |
| ೩. | ಕಳೆದ ಏಳು ವರ್ಷಗಳಿಂದ ಶ್ರಾವಣೀ ವಿಶೇಷಾಂಕದ ಪ್ರಕಟಣೆಯಿಂದ ಸಂಭವಿಸಿದ ನಷ್ಟ | 20,000-00 |
| ೪. | ಅಪಘಾತದ ಸಮಯದಲ್ಲಿ ವಾಹನದಲ್ಲಿದ್ದವರಿಗೆ ಜಖಂ ಆಗಿ ವೈದ್ಯಕೀಯ ವಿಭಾಗ(ಆಸ್ಪತ್ರೆ)ಕ್ಕೆ ವೆಚ್ಚವಾದ ಹಣ | 30,000-00 |

**N. B:-** ಪ್ರಕಾಶಕರ ಸ್ವಾಸ್ಥ್ಯ ಹದಗೆಟ್ಟು, ಕಳೆದ ೮ ತಿಂಗಳಿಂದ ಪ್ರಚಾರಕಾರ್ಯ ಸ್ಥಗಿತಗೊಂಡು, ಪುಸ್ತಕಗಳು ವಿಕ್ರಯವಾಗದೆ, ಹೊಸ ಚಂದಾದಾರರನ್ನು ಮಾಡಲಾಗದೆ, ಆರ್ಥಿಕವಾಗಿ ಆದ ಕಷ್ಟನಷ್ಟಗಳು ಅಪಾರ. ಇದನ್ನೆಲ್ಲಾ ಗಮನಿಸಿ ವಾರ್ಷಿಕ ಚಂದಾದಾರರು ಹಾಗೂ ಆಜೀವ ಸದಸ್ಯರೂ ಸಹ ತಮ್ಮ ಚಂದಾ ಬಾಕಿಯನ್ನು ಪ್ರೀತಿಯಿಟ್ಟು ಕಳುಹಿಸಬೇಕಾಗಿ ನಮ್ರ ವಿನಂತಿ.

ನಮ್ಮ ಎಲ್ಲಾ ಸದಸ್ಯ ಬಾಂಧವರು ವೇದ ಪ್ರಚಾರದ ಹಾಗೂ ಪ್ರಸಾರದ ಪವಿತ್ರ ಕಾರ್ಯ ಸ್ಥಗಿತವಾಗದಂತೆ ಸಾಧ್ಯವಾದಷ್ಟು ತಮ್ಮ ಮಿತ್ರರು ಹಾಗೂ ಬಾಂಧವರನ್ನು ಚಂದಾದಾರರನ್ನಾಗಿ ಮಾಡಿ ಪ್ರೋತ್ಸಾಹಿಸಬೇಕಾಗಿ ಕಳಕಳಿಯ ಬಿನ್ನಹ ಹಾಗೂ ವೇದ ಪ್ರಚಾರ ನಿಧಿಗೆ ಸಾಧ್ಯವಾದಷ್ಟು ಧನರಾಶಿಯನ್ನು ಏಕಗಂಟಿನಿಂದ ಅಥವಾ ತಿಂಗಳು ತಿಂಗಳು ಕಂತುಗಳಲ್ಲಿ ಕಳುಹಿಸಿ ವೇದಮಾತೆಯ ಕೃಪೆಗೆ ಪಾತ್ರರಾಗಬೇಕಾಗಿ ಸವಿನಯ ಪ್ರಾರ್ಥನೆ.

ಉದ್ದಿಮೆದಾರರು ಹಾಗೂ ವ್ಯಾಪಾರೀ ಸಂಸ್ಥೆಗಳು ತಮ್ಮ ಜಾಹೀರಾತುಗಳನ್ನು ಪ್ರೀತಿಯಿಟ್ಟು ಕಳುಹಿಸಬೇಕಾಗಿ ವಿನಂತಿ.

ಇತಿ ತಮ್ಮೆಲ್ಲರ ನೆರವನ್ನು ಅಪೇಕ್ಷಿಸುತ್ತಿರುವ,

**—ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ,**
ಕುಂಜಿಬೆಟ್ಟು, ಉಡುಪಿ-576 102.

ಹೇಳಿತು—"ಅಯ್ಯೊ ಹುಚ್ಚಪ್ಪಗಳಿರಾ, ನೀವು ಎಲ್ಲವನ್ನೂ ತಂದಿದ್ದೀರಿ. ಆದರೆ ತಿನ್ನಲಿಕ್ಕೇ ಏನೂ ಇಲ್ಲವಲ್ಲ, ಬೇಯಿಸುವುದೇನನ್ನು? ತಿನ್ನುವುದೇನನ್ನು?"

ಪಕ್ಷಿಯ ಮಾತು ಕೇಳಿ ಹುಡುಗರು ಮೇಲೆ ನೋಡಿ ಹೇಳಿದರು—"ನಿಲ್ಲು, ನಿಲ್ಲು. ನಿನ್ನನ್ನೇ ಹಿಡಿದು ಬೇಯಿಸಿ ತಿನ್ನುತ್ತೇವೆ."

ಪಕ್ಷಿ ಹೆದರಿ ನುಡಿಯಿತು—"ಬೇಡ ಬೇಡ. ನನ್ನನ್ನು ಕೊಲ್ಲಬೇಡಿರಿ. ನಿಮಗೆ ತುಂಬಾ ಐಶ್ವರ್ಯವಿರುವ ಜಾಗವನ್ನು ತೋರಿಸುವೆ".

ಎಲ್ಲರೂ ಅಲ್ಲಿಗೆ ಹೋದರು. ಒಂದು ಸ್ಥಳದ ಬಳಿ "ಇಲ್ಲಿ ಅಗೆಯಿರಿ"—ಎಂದು ಪಕ್ಷಿ ಹೇಳಿತು.

ಅಲ್ಲಿ ಅಗೆದು ನೋಡಿದಾಗ ಒಳಗೆ ಬಹು ದೊಡ್ಡ ನಿಧಿ ಇತ್ತು. ಚಿನ್ನ, ಬೆಳ್ಳಿ, ಮುತ್ತು, ರತ್ನ, ವಜ್ರ, ಇತ್ಯಾದಿಗಳಿಂದ ತುಂಬಿತ್ತು. ಅದೆಲ್ಲವನ್ನೂ ತೆಗೆದುಕೊಂಡು ಅವರು ಮನೆಗೆ ಬಂದರು. ಸುಖವಾಗಿ ಜೀವಿಸತೊಡಗಿದರು. ನೆರೆಮನೆಯವನು ಇವರ ಅಭಿವೃದ್ಧಿಯನ್ನು ನೋಡಿ ಕಾರಣವನ್ನು ಕೇಳಿದನು. ಇವರು ಎಲ್ಲವನ್ನೂ ಯಥಾವತ್ತಾಗಿ ತಿಳಿಸಿದರು.

ಆ ನೆರೆಮನೆಯವನು ಎಲ್ಲವನ್ನೂ ಕೇಳಿ ತಾನೂ ಪರಿವಾರದೊಡನೆ ಹೊರಟನು.

ಅವರು ಅದೇ ಮರದ ಕೆಳಗೆ ಬಂದು ತಲುಪಿದರು. ತಂದೆ ಹಿರಿಯ ಮಗನಿಗೆ ಹೇಳಿದ:— "ಹೋಗಿ ಸ್ವಲ್ಪ ಸೌದೆಯನ್ನು ತಾ."

ಆ ಮಗ ಚೀರಿದ—"ಚಿಕ್ಕವನನ್ನೇಕೆ ಕಳುಹಿಸುವುದಿಲ್ಲ? ಅವನ ಕೈ-ಕಾಲುಗಳು ಮುರಿದು ಹೋಗಿವೆಯೇನು?"

ತಂದೆ ಕಿರಿಯವನಿಗೆ ಹೇಳಿದಾಗ ಅವನೆಂದ—"ನಾನು ತುಂಬಾ ದಣಿದಿದ್ದೇನೆ. ನನಗೆ ನಡೆಯಲೂ ಸಾಧ್ಯವಿಲ್ಲ. ಇನ್ನಾರಿಗಾದರೂ ಹೇಳಬಾರದೆ?"

ತಂದೆ ಮತ್ತೊಬ್ಬನಿಗೆ ಹೇಳಿದಾಗ ಅವನೂ ಆಗುವುದಿಲ್ಲವೆಂದನು. ಯಾರೂ ಹೋಗಲಿಲ್ಲ. ಕೊನೆಗೆ ಪತ್ನಿಯು ನಾನೇ ಹೋಗಿ ಬರುತ್ತೇನೆಂದಳು. ಆತನು—"ನೀನು ಹೋಗುವುದು ಬೇಡ. ಎಲ್ಲಿಯಾದರೂ ಕೈ ಕಾಲುಗಳನ್ನು ಮುರಿದುಕೊಂಡು ಬಂದೀಯೆ." ಎಂದನು. ಹೀಗೆ ಯಾರೂ ಹೋಗಲಿಲ್ಲ. ಕಟ್ಟಿಗೆ ಬರಲಿಲ್ಲ, ನೀರು ಬರಲಿಲ್ಲ, ಕಲ್ಲುಗಳು ಬರಲಿಲ್ಲ, ಒಲೆ ಉರಿಯಲಿಲ್ಲ. ಇದನ್ನೆಲ್ಲಾ ನೋಡುತ್ತಾ ಕುಳಿತಿದ್ದ ಅದೇ ಹಕ್ಕಿಯು "ಎಂಥಾ ವಿಚಿತ್ರ ಜನಗಳು ನೀವು? ಕಟ್ಟಿಗೆ ಇಲ್ಲ, ನೀರಿಲ್ಲ, ಕಲ್ಲುಗಳಿಲ್ಲ, ಒಲೆ ಉರಿಸಲಿಲ್ಲ— ನೀವು ಹಸಿವೆಯಿಂದಲೇ ಸಾಯುತ್ತೀರೋ? ಅಥವಾ ಏನನ್ನಾದರೂ ಹೇಗೆ ತಿನ್ನುತ್ತೀರಿ" ಎಂದಿತು.

ಒಬ್ಬ ಹುಡುಗನೆಂದ, "ಏಕೆ? ನೀನಿದ್ದೀಯಲ್ಲಾ, ನಿನ್ನನ್ನೇ ಹಿಡಿದು ತಿನ್ನುತ್ತೇವೆ". ಹಕ್ಕಿಯು ಗಹಗಹಿಸಿ ನಕ್ಕು ಹೇಳಿತು—"ಅಯ್ಯೋ ಸೋಮಾರಿಗಳಿರಾ! ನನ್ನನ್ನು ಹಿಡಿದು ತಿನ್ನುವವರು ಹೊರಟುಹೋದರು. ಯಾವ ಕೆಲಸವನ್ನೂ ಮಾಡಲಾಗದ ನೀವು ನನ್ನನ್ನೇನು ಹಿಡಿದೀರಿ?"—ಎನ್ನುತ್ತಾ ಹಾರಿಹೋಯಿತು.

ಇದು ಒಕ್ಕಟ್ಟು ಮತ್ತು ಪುರುಷಾರ್ಥದ ಪರಿಣಾಮ. ಯಾರು ಸಹಮತರಾಗಿ ಸಂಸಾರದಲ್ಲಿ ಕೆಲಸ ಮಾಡುತ್ತಾರೋ ಅವರಿಗೆ ಸಂಪತ್ತು ಖಂಡಿತವಾಗಿ ಸಿಕ್ಕುತ್ತದೆ. ಸುಖವೂ ಲಭಿಸುತ್ತದೆ. ಯಾರು ಪರಸ್ಪರ ಜಗಳವಾಡುತ್ತಾ ಇರುತ್ತಾರೋ ಅವರು ಇದ್ದುದನ್ನೂ ಕಳೆದುಕೊಳ್ಳುತ್ತಾರೆ.

ನೆನಪಿಡಿರಿ. ಸಮೃದ್ಧಿಯ ಮೂಲ ಮಂತ್ರವೇ ಶ್ರದ್ಧಾಪೂರ್ವಕ ದುಡಿಮೆ. ವೇದಗಳು ಪರಿಶ್ರಮದ ಶಿಕ್ಷಣವನ್ನು ನೀಡುತ್ತವೆ. ಉಪನಿಷತ್ತುಗಳು ಪುರುಷಾರ್ಥದ ಹಿರಿಮೆಯನ್ನು ಸಾರುತ್ತವೆ. ಗೀತೆ, ಮನುಸ್ಮೃತಿ ಇತ್ಯಾದಿಗಳೂ ಕರ್ಮಯೋಗದ ಮಹತ್ವವನ್ನು ಸಾರಿ ಹೇಳುತ್ತಿವೆ, ಈ ಎಲ್ಲಾ ಧರ್ಮಗ್ರಂಥಗಳೂ ಪುರುಷಾರ್ಥದೊಂದಿಗೆ ಐಕ್ಯತೆ ಮತ್ತು ಸಂಘಟನೆಯ ಪಾಠವನ್ನು ಹೇಳಿಕೊಡುತ್ತಿವೆ. ಈ ಧರ್ಮಗ್ರಂಥಗಳ ಸಂದೇಶವನ್ನು ಅನುಸರಿಸದೆ ಇರುವುದರಿಂದಲೇ ನಮ್ಮ ದೇಶವು ಅವನತಿಯತ್ತ ಸಾಗುತ್ತಿದೆ. ರಾಷ್ಟ್ರ ನಿರ್ಮಾಣ, ವಿಶ್ವೋತ್ಥಾನ, ಧರ್ಮ ಸಂಸ್ಥಾಪನ, ಸಂಸ್ಕೃತಿ ಪ್ರಸಾರಣ, ಚರಿತ್ರ ನಿರ್ಮಾಣ, ಐಶ್ವರ್ಯೋಪಾರ್ಜನ ಇತ್ಯಾದಿಗಳ ಸಿದ್ಧಿಗಾಗಿ 'ಚರೈವೇತಿ ಚರೈವೇತಿ'—ಯ ಲಕ್ಷ್ಯವನ್ನಿಟ್ಟುಕೊಂಡು ಮುಂದೆ ಸಾಗಬೇಕು. ಆಗ ರಾಷ್ಟ್ರದ ವಿವಿಧ ಕ್ಷೇತ್ರಗಳಲ್ಲಿ ಮತ್ತು ವಿಶ್ವದ ತುಮುಲ ಸಂಘರ್ಷಗಳಲ್ಲಿ ಎಳ್ಳಿನಷ್ಟೂ ವಿಚಲಿತರಾಗದೆ ಪ್ರಗತಿ ಸಾಧಿಸಲು ಸಾಧ್ಯ. ಐಕ್ಯತೆ ಹಾಗೂ ಪುರುಷಾರ್ಥದ ಆಶ್ರಯವನ್ನು ಹೊಂದಿದ ಯಾವುದೇ ವ್ಯಕ್ತಿ ಅಥವಾ ಜನಾಂಗ ನಿರಂತರವಾಗಿ ಪ್ರಗತಿಯನ್ನು ಹೊಂದುತ್ತಾ, ಎಲ್ಲಾ ರೀತಿಯ ಐಶ್ವರ್ಯಗಳನ್ನೂ ಪಡೆಯುತ್ತಾ ಮುಂದೆ ಸಾಗುತ್ತದೆ. ಆದ್ದರಿಂದ 'ಚರೈವೇತಿ, ಚರೈವೇತಿ'.

---

---

## ಸ್ವಾಧ್ಯಾಯಾನ್ಮಾ ಪ್ರಮದಃ

ಅಸಂಖ್ಯ ಭೇದ-ಪ್ರಭೇದಗಳಿಂದ, ಛಿನ್ನ-ಭಿನ್ನವಾಗಿರುವ ಮಾನವ ಜನಾಂಗವನ್ನು ಒಂದುಗೂಡಿಸಿ ವ್ಯಷ್ಟಿ-ಸಮಷ್ಟಿಗಳ ಹಿತವನ್ನು ಕೊಡಬಲ್ಲ ಶಕ್ತಿ ವಿಶ್ವಾತ್ಮನ ಅಮರವಾಣಿಯಾದ ವೇದಗಳಿಗೆ ಮಾತ್ರ ಇದೆ. ಈ ವೇದಗಳ ವೈಜ್ಞಾನಿಕವೂ, ಸಾರ್ವಭೌಮವೂ ಆದ ಸ್ವರೂಪವನ್ನು ತಿಳಿಯಬಯಸುವವರು ಪಂ॥ ಸುಧಾಕರ ಚತುರ್ವೇದಿಯವರ "ಋಗ್ವೇದ ದರ್ಶನ"ವನ್ನು ಅಗತ್ಯ ಓದಿರಿ. ಈ ಗ್ರಂಥದೊಂದಿಗೆ ಉಪಯುಕ್ತವಾದ 'ಋಗ್ವೇದ ಮಂತ್ರಗಳ ವರ್ಣಾನುಕ್ರಮ ಸೂಚಿ' ಸಹ ಉಚಿತವಾಗಿ ಪಡೆಯಿರಿ. ಶ್ರಾವಣೀ ಪರ್ವದ ಸಾರ್ಥಕತೆಗೆ, ಸ್ವಾಧ್ಯಾಯಯೋಗ್ಯ ಗ್ರಂಥವಿದು.

ಬೆಲೆ : ಸಾದಾ ಪ್ರತಿ ರೂ. 25 00 ಮತ್ತು ಉ. ಪ್ರತಿ ರೂ. 30-00

# ಅನಂತಾ ವೈ ವೇದಾಃ

● ಲೇ: ಸುಕುಮಾರ ಶಾಸ್ತ್ರಿ

ಸಾಧಾರಣ ಜನರ ಮಾತಂತಿರಲಿ, ಪಂಡಿತರೆನಿಸಿಕೊಳ್ಳುವವರೂ ಕೂಡಾ ಅನಂತಾ ವೈ ವೇದಾಃ ಎಂದರೆ ವೇದಗಳು ಅಸಂಖ್ಯ ಎಂದು ಅರ್ಥ ಮಾಡುತ್ತಾರೆ. ವಸ್ತುತಃ ಅನಂತ ಶಬ್ದದ ಅರ್ಥ ಅಸಂಖ್ಯ ಎಂದು ಮಾಡುವುದು ಬಹಳ ಹಾಸ್ಯಾಸ್ಪದ ಮತ್ತು ಮೂರ್ಖತನದ ಮಾತು. ಪರಮಾತ್ಮನು ಅನಂತನಾಗಿದ್ದಾನೆ, ಅದರ ಅರ್ಥ ಪರಮಾತ್ಮನು ಅಸಂಖ್ಯ ಎಂದಲ್ಲ. ಅಪಿತು ನ ಅಂತ=ಅನಂತ ಅರ್ಥಾತ್ ಸಾವಿಲ್ಲದವನು, ಅಪರಿಮಿತ ಬಲ, ಮಹಿಮೆ, ಜ್ಞಾನ, ಗುಣ, ಐಶ್ವರ್ಯ, ಮೊದಲಾದವುಗಳುಳ್ಳವನು ಎಂದಾಗುತ್ತದೆ. ಅವನನ್ನು ಯಾವುದೇ ಬಂಧನದಲ್ಲಿ ಸಿಲುಕಿಸಲು ಸಾಧ್ಯವಿಲ್ಲ. ಅವನ ಸೀಮೆ ಇಂತಿಷ್ಟೇ ಎಂದು ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲ.

**ಯಸ್ಯಾಂತಂ ನ ವಿದುಃ ಸುರಾಸುರಗಣಾಃ ದೇವಾಯ ತಸ್ಮೈ ನಮಃ ||**

ಸುರಾಸುರರು ಕೂಡಾ ಯಾವನ ಅಂತ್ಯವನ್ನು, ಪಾರವನ್ನು ತಿಳಿದುಕೊಳ್ಳಲು ಅಸಮರ್ಥರಾಗಿದ್ದಾರೋ ಅಂತಹ ದಿವ್ಯಗುಣ–ದಿವ್ಯಶಕ್ತಿಯುಳ್ಳ ಪರಮಾತ್ಮನಿಗೆ ನಮ್ಮ ನಮನಗಳು.

ಅನಂತ ಎಂಬ ಶಬ್ದವು ಗುಣವಾಚಕವಾಗಿದೆ, ಸಂಖ್ಯಾ ವಾಚಕವಲ್ಲ. ಆದುದರಿಂದಲೇ ಅನೇಕ ಜನರ ಹೆಸರು ಅನಂತ ಎಂದಿರುವುದನ್ನು ನಾವು ಎಲ್ಲೆಲ್ಲಿಯೂ ಕಾಣುತ್ತೇವೆ.

ವೇದ ಶಬ್ದವು 'ವಿದ್' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ವಿದ್ ಧಾತುವಿನ ಅರ್ಥ ಜ್ಞಾನ. ಯಾವುದರ ಮೂಲಕ ಮಾನವನು ಸಮಗ್ರ ಜ್ಞಾನವನ್ನು ಪಡೆದು ಅಭ್ಯುದಯ ಹಾಗೂ ನಿಶ್ರೇಯಸ್ಸನ್ನೂ ಹೊಂದಲು ಸಮರ್ಥನಾಗುತ್ತಾನೋ ಅದೇ ವೇದ. 'ಅನಂತಾ ವೈ ವೇದಾಃ' ಇದರಲ್ಲಿ ವೇದಾಃ ಶಬ್ದವು ಬಹುವಚನದ್ದಾಗಿದೆ. ಏಕೆಂದರೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ನಾಲ್ಕು ವೇದಗಳಿವೆ. ಋಗ್ವೇದ ಜ್ಞಾನ ಪ್ರಧಾನ, ಯಜುರ್ವೇದ ಕರ್ಮ ಪ್ರಧಾನ, ಸಾಮವೇದ ಉಪಾಸನಾ ಪ್ರಧಾನ ಹಾಗೂ ಅಥರ್ವವೇದ ವಿಜ್ಞಾನ ಪ್ರಧಾನವಾಗಿದೆ.

**ಯಸ್ಮಾದೃಚೋ ಅಪಾತಕ್ಷನ್ ಯಜುರ್ಯಸ್ಮಾದಪಾಕಷನ್ ಸಾಮಾನಿ ಯಸ್ಯ ಲೋಮಾನಿ ಅಥರ್ವಾಂಗಿರಸೋ ಮುಖಂ ತಂ ಸ್ಕಂಭಂ ಬ್ರೂಹಿ ಕತಮಃ ಸ್ವಿದ್ದೇವಸಃ ||** [ಅಥರ್ವ] ಈ ಮಂತ್ರದಲ್ಲಿ ಸ್ಪಷ್ಟವಾಗಿ ಋಗ್ವೇದ, ಯಜುರ್ವೇದ

ಸಾಮವೇದ ಮತ್ತು ಅಥರ್ವ ವೇದ ಈ ನಾಲ್ಕು ವೇದಗಳು ಪರಮಾತ್ಮನಿಂದಲೇ ನಿಸ್ಸೃತವಾಗಿವೆ ಎಂದು ಹೇಳಿದೆ. ಇಂಥ ಹಲವಾರು ಮಂತ್ರಗಳು ವೇದದಲ್ಲಿವೆ. ಇವುಗಳ ಹೊರತಾಗಿ ಅನ್ಯ ಯಾವುದೇ ವೇದದ ಹೆಸರು ವೇದದಲ್ಲಿ ಸಿಗುವುದಿಲ್ಲ. ಈ ರೀತಿ 'ಅನಂತಾ ವೈ ವೇದಾಃ' ಎಂದರೆ ವೇದ ಜ್ಞಾನವು ಅನಂತವಾಗಿದೆ ಹೊರತು ವೇದಗಳು ಅಸಂಖ್ಯ ಎಂದಾಗುವುದಿಲ್ಲ. ಮುಂಡಕೋಪನಿಷತ್ತಿನಲ್ಲಿ **ಅವಿದ್ಯಾಯಾ ಮಂತರೆ ವರ್ತಮಾನಾಃ । ಸ್ವಯಂ ಧೀರಾಃ ಪಂಡಿತಮ್ಮನ್ಯಮಾನಾಃ ।** [ಮು: ೧-೨೮] ಸ್ವತಃ ಅಜ್ಞಾನಿಗಳಾಗಿದ್ದು ಧೀರರು ಪಂಡಿತೋತ್ತಮರು ಎಂದು ತಮ್ಮ ಬೆನ್ನನ್ನು ತಾವೇ ತಟ್ಟಿಕೊಳ್ಳುವಂತಹ ಮಹಾ ಪಂಡಿತರಿಗೆ "ಅನಂತಾ ವೈ ವೇದಾಃ" ಈ ವಚನ ಎಲ್ಲಿದೆ ಯಾವ ಗ್ರಂಥದಲ್ಲಿದೆ ಎಂಬ ವಿಷಯ ಗೊತ್ತಿಲ್ಲ. ಇಲ್ಲಿ ನಾವಿದನ್ನು ವಿವರವಾಗಿ ಕೊಡುತ್ತೇವೆ. ಇದರಿಂದ ಓದುಗರಿಗೆ 'ಅನಂತಾ ವೈ ವೇದಾಃ' ಇದರರ್ಥ ಇನ್ನೂ ಸ್ಪಷ್ಟವಾಗುತ್ತದೆ. ತೈತ್ತಿರೀಯ ಬ್ರಾಹ್ಮಣದಲ್ಲಿ ಈ ವಿಷಯ ಈ ರೀತಿ ಬರುತ್ತದೆ.

**ಭರದ್ವಾಜೋ ಹ ತ್ರಿಭಿರಾಯುರ್ಭಿರ್ಬ್ರಹ್ಮಚರ್ಯಮುವಾಸ । ತಂ ಹ ಜೀರ್ಣಂ ಸ್ಥವಿರಂ ಶಯಾನಮ್ ಇಂದ್ರ ಉಪವ್ರಜ್ಯೋವಾಚ ಭರದ್ವಾಜ । ಯತ್ತ । ಚತುರ್ಥ ಮಾಯುರ್ದದ್ಯಾ ಕಿಮನೇನ ಕುರ್ಯಾ ಇತಿ । ಬ್ರಹ್ಮಚರ್ಯ ಮೇವೈತೇನ ಚರೇಯಮಿತಿ ಹೋವಾಚ । ತಂ ತ್ರೀನ್ ಗಿರಿರೂಪಾನ ವಿಜ್ಞಾತಾನಿವ ದರ್ಶಯಾಂಚಕಾರ ತೇಷಾಂ ಹೈಕೈಕಸ್ಮಾನ್ಮುಷ್ಟಿ ಮಾದದೆ । ಸ ಹೋವಾಚ ಭರದ್ವಾಜೇತ್ಯಾ ಮಂತ್ರ್ಯ ವೇದಾ ವಾ ಏತೆ, ಅನಂತ ವೈ ವೇದಾಃ, ಏತೈಸ್ತ್ರಿಭಿರಾಯುರ್ಭಿರನ್ವವೋಚಥಾಃ ಅಥ ತ ಇತರ ದನೂಕ್ತಮೇವ ॥** [ತೈ. ಬ್ರಾ. ೩-೧೦-೧೧-೩]

ಭರದ್ವಾಜನು ಮುನ್ನೂರು ವರ್ಷಗಳಷ್ಟು ಕಾಲ ವೇದಾಧ್ಯಯನ ಮಾಡಿದನು. (ಶತಾಯುರ್ವೈ: ಪುರುಷಃ $100 \times 3 = 300$) ಈ ಅಧ್ಯಯನ ಮಾಡುತ್ತಾ ಅತ್ಯಂತ ವೃದ್ಧಾವಸ್ಥೆಯನ್ನು ಹೊಂದಿದನು. ಆಗ ಇಂದ್ರನು ಅವನ ಸಮೀಪ ಬಂದು ನಿನಗೆ ಇನ್ನೊಂದು ಆಯು ಅರ್ಥಾತ್ ನೂರು ವರ್ಷಗಳಷ್ಟನ್ನು ಕೊಟ್ಟರೆ ಏನು ಮಾಡುವಿ ಎಂದು ಕೇಳಿದನು, ಭರದ್ವಾಜನು ವೇದಾಧ್ಯಯನವನ್ನೇ ಮಾಡುವೆನು ಎಂದುತ್ತರಿಸಿದನು. ಆಗ ಇಂದ್ರನ ಪರ್ವತದಂತಿರುವ ಮೂರು ಜ್ಞಾನ ರಾಶಿರೂಪ ವೇದಗಳನ್ನು ತೋರಿಸಿ ಪ್ರತಿಯೊಂದು ರಾಶಿಯಿಂದ ಒಂದೊಂದು ಮುಷ್ಟಿಯನ್ನು ತೆಗೆದು ಭರದ್ವಾಜ! ಇಷ್ಟರ ತನಕ ನೀನು ಸಂಪಾದಿಸಿದ ಜ್ಞಾನ ಇಷ್ಟೇ. ವೇದ ಜ್ಞಾನಕ್ಕೆ ಅಂತ್ಯವೇ ಇಲ್ಲ. ಅದು ಅನಂತವಾಗಿದೆ. ಈ ರೀತಿ ತೈತ್ತಿರೀಯ ಬ್ರಾಹ್ಮಣದಿಂದ ಅನಂತಾ ವೈ ವೇದಾಃ ಎಂದರೆ ವೇದಜ್ಞಾನವು ಅನಂತವಾಗಿದೆ ಎಂದು ವೇದ್ಯವಾಗುತ್ತದೆ. ಅದನ್ನು ತಿಳಿಯದೆ ಕೇವಲ ಒಂದು ವಾಕ್ಯಾಂಶವನ್ನು ಮಾತ್ರ ಹೇಳಿ ಇತರರನ್ನೂ ಮೂರ್ಖರನ್ನಾಗಿ ಮಾಡುತ್ತಾರೆ. ಇಂಥವರಿಗೆ ಮುಂಡಕೋಪನಿಷತ್ತಿನಲ್ಲಿ **"ಅಂಧೇನ ನೀಯಮಾನಾ ಯಥಾಂಧಾ"** ಕುರುಡರನ್ನು ತನ್ನೊಂದಿಗೆ ಕರೆದೊಯ್ಯುವ ಕುರುಡನಂತೆ ಎಂದು ಹೇಳಿದೆ.

---

# ವೇದಪ್ರಚಾರ ನಿಧಿಗೆ ದಾನ

ಶ್ರೀ ಆರ್. ನಾರಾಯಣ, ಬೆಂಗಳೂರು-೩೧- ಇವರು ದಿನಾಂಕ ೮-೬-೮೭ರಂದು ವೇದಪ್ರಚಾರದ ಅಭಿವೃದ್ಧಿ ಕಾರ್ಯಗಳಿಗಾಗಿ ರೂ. ೪೦-೦೦ನ್ನು ವೇದಪ್ರಚಾರ ನಿಧಿಗೆ ದಾನವಾಗಿ ಸಮರ್ಪಿಸಿದ್ದಾರೆ.

ಶ್ರೀಯುತರಿಗೆ ಪರಮ ಕರುಣಾಳುವಾದ ಪರಮಾತ್ಮನು ಸಕಲ ಐಶ್ವರ್ಯಗಳನ್ನೂ, ಆಯುರಾರೋಗ್ಯಾದಿ ಭಾಗ್ಯಗಳನ್ನೂ ನೀಡಿ, ವೈದಿಕಧರ್ಮದ ಸೇವೆಯಲ್ಲಿ ನಿರಂತರವಾಗಿ ತೊಡಗುವಂತೆ ಅನುಗ್ರಹಿಸಲೆಂದು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

X X X X

ಶ್ರೀಮತಿ ಸುಗುಣಾದೇವಿ ಸುಖದೇವ ಕಾಮತ್, ಮಂಗಳೂರು ಇವರು ಡಿ|| ೨೩-೬-೮೭ರಂದು ತಮ್ಮ ಸುಪುತ್ರ ಚಿ| ಸುಧೀಂದ್ರನ ಪ್ರಥಮ ಜನ್ಮದಿನವನ್ನು ಆಚರಿಸಿ ಅದರ ನೆನಪಿಗಾಗಿ ವೇದಪ್ರಚಾರ ನಿಧಿಗೆ ರೂ. ೨೦೧-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ಕುಮಾರ ಸುಧೀಂದ್ರನು ಆಯುರಾರೋಗ್ಯದಿಂದ ಕೂಡಿದವನಾಗಿ ಬೆಳೆಯುತ್ತಾ ಮಾತಾಪಿತೃಗಳಿಗೆ ನಲಿವನ್ನು ನೀಡುವಂತೆ ವರ್ಧಿಸಲಿ ಎಂಬುದಾಗಿ ಹಾರ್ದಿಕ ಹರಸುವೆವು.

X X X X

ದಿನಾಂಕ ೨೭-೬-೮೭ರಂದು ರವಿವಾರ ಶ್ರೀ ಪಂ|| ಮಂಜುನಾಥ ಶಾಸ್ತ್ರಿಯವರ ಪೌರೋಹಿತ್ಯದಲ್ಲಿ ಪೂರ್ವಾಹ್ನ ಶ್ರೀಮತಿ ಸುಜಾತಾದೇವಿ–ಶ್ರೀ ಸುಧಾಕರ ಕಾಮತರ ಸುಪುತ್ರ ಚಿ| ಸುವಿನೀತನ ಬ್ರಹ್ಮೋಪದೇಶ ಸಂಸ್ಕಾರವೂ, ಅಪರಾಹ್ನ ಗೋಧೂಳಿ ಲಗ್ನದಲ್ಲಿ ಶ್ರೀಮತಿ ಸುಶೀಲಾದೇವಿ–ಶ್ರೀ ಸಂಜೀವ ಕಾಮತರ ಸುಪುತ್ರಿ ಸುಮಿತ್ರಾದೇವಿಯವರ ವಿವಾಹವು ಶ್ರೀ ಜಿ. ನರಸಿಂಹ ನಾಯಕರ ಸುಪುತ್ರ ಶ್ರೀ ಮಾಧವ ನಾಯಕರೊಡನೆ ವೈದಿಕ ರೀತಿಯಲ್ಲಿ ನಡೆದವು. ಈ ಸಂದರ್ಭದಲ್ಲಿ ರೂ. ೫೦೧-೦೦ನ್ನು ವೇದಪ್ರಚಾರ ನಿಧಿಗೆ ದಾನವಾಗಿ ಸಮರ್ಪಿಸಿದ್ದಾರೆ.

ಬ್ರಹ್ಮಚಾರಿ ಚಿ|| ಸುವಿನೀತನು ಸಕಲ ವಿದ್ಯೆಗಳಲ್ಲಿ ಪಾರಂಗತನಾಗಿ ವಿನಯಾದಿ ಸದ್ಗುಣಗಳಿಂದ ಸುಶೋಭಿಸುವಂತೆ ಪರಮಾತ್ಮನು ಅನುಗ್ರಹಿಸಲಿ. ಹಾಗೂ ನೂತನ ದಂಪತಿಗಳು ತಮ್ಮ ಗಾರ್ಹಸ್ಥ್ಯ ಜೀವನದಲ್ಲಿ ಆನಂದಾದಿ ಸಕಲ ಸೌಭಾಗ್ಯಗಳನ್ನೂ ಹೊಂದಿದವರಾಗಿ ಆದರ್ಶಪ್ರಾಯರಾಗಿ, ಧರ್ಮಾತ್ಮರಾಗಿ ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಲಿ ಎಂದು ಪರಮದಯಾಮಯನಲ್ಲಿ ಹೃತ್ಪೂರ್ವಕ ಪ್ರಾರ್ಥಿಸುವೆವು.

X X X X

ಶ್ರೀಮತಿ ಅದಿತಿ ಜ್ಯೇಷ್ಠವರ್ಮನ್, ಮುಂಬಯಿ-ಇವರು ತಮ್ಮ ಸುಪುತ್ರಿ ಕು|| ಗಾಯತ್ರಿಯ ಚೂಡಾಕರ್ಮ ಸಂಸ್ಕಾರವನ್ನು ದಿ| ೩೦-೬-೮೭ರಂದು ವೇದೋಕ್ತವಾಗಿ ಆಚರಿಸಿ ವೇದಪ್ರಚಾರ ನಿಧಿಗೆ ರೂ. ೧೦೦-೦೦ನ್ನು ದಾನವಾಗಿ ಸಮರ್ಪಿಸಿದ್ದಾರೆ.

ಕು|| ಗಾಯತ್ರಿಯು ಆಯುರಾರೋಗ್ಯಗಳಿಂದ ಸುಶೋಭಿತಳಾಗಿ ಪ್ರವೃದ್ಧಮಾನಕ್ಕೆ ಬರುತ್ತಾ ಮಾತಾಪಿತರಿಗೂ, ಹಿರಿಯರಿಗೂ ಸಂತೋಷವನ್ನುಂಟುಮಾಡುವಂತಾಗಲಿ–ಎಂದು ಹೃತ್ಪೂರ್ವಕ ಹರಸುವೆವು.

## ರೂ. ೧೫೦-೦೦ ಸಲ್ಲಿಸಿದ ಅಜೀವ ಸದಸ್ಯರು

೧೧೮೯ ಶ್ರೀ ಸತ್ಯಸಾಯಿ ಬಾಲಕರ ಪ್ರೌಢಶಾಲೆ, ಮುದ್ದೇನಹಳ್ಳಿ, ಚಿಕ್ಕಬಳ್ಳಾಪುರ ತಾ||

೧೧೯೦ ಶ್ರೀ ಸರ್. ಎಂ. ವಿಶ್ವೇಶ್ವರಯ್ಯ ಸ್ಮಾರಕ ಪ್ರೌಢಶಾಲೆ, ಚಿಕ್ಕಬಳ್ಳಾಪುರ.

೧೧೯೧ ಶ್ರೀ ಟಿ. ಸತೀಶರಾವ್, 'ಗೀತಾ ನಿವಾಸ' ಕೊಟ್ಟಾರ, ಮಂಗಳೂರು.

೧೧೯೨ ಶ್ರೀ ಮಾರೂರು ಕಮಲಾಕ್ಷ ಪೈ, ಗಾಂಧಿನಗರ, ಮಂಗಳೂರು.

೧೧೯೩ ಶ್ರೀ ಕೆ. ಮೋಹನದಾಸ ಶೆಣೈ, ಮಠದ ಕಣಿ, ಮಂಗಳೂರು.

೧೧೯೪ ಶ್ರೀ ಹರಿದಾಸ ಎಂ. ನಾಯಕ್, ಪಂಜಿಮೊಗರು, ಕೂಳೂರು, ಮಂಗಳೂರು.

೧೧೯೫ ಡಾ| ಕೆ. ಎಚ್. ಪೂಜಾರಿ, ಪುಷ್ಪಾ ಕ್ಲಿನಿಕ್, ಕಾಪು, ದ. ಕ.

೧೧೯೬ ಶ್ರೀ ಪಿ. ಶೇಷಪ್ಪ ಹಂದೆ, 'ಅಂಬಿಕಾ ಭವನ' ಆರ್ಮೂರು, ನಿಜಾಮಾಬಾದ್.

೧೧೯೭ ಶ್ರೀ ಕೆ. ಪಿ. ಶೆಟ್ಟಿ, c/o 99 ಎ. ಪಿ. ಓ.

೧೧೯೮ ಶ್ರೀ ಕೆ. ಎಸ್. ಶೇಷಪ್ಪ & ಸನ್ಸ್, ಕನಕಪುರ.

೧೧೯೯ ಶ್ರೀ ಎ. ಸುರೇಶ, ದೇವರಾಜ ಮಾರ್ಕೆಟ್, ಮೈಸೂರು.

೧೨೦೦ ಶ್ರೀ ಸುರೇಶ ವಿ. ಪೈ, 'ಸಂತೋಷ' ವಿವೇಕಾನಂದ ಮಾರ್ಗ, ಮಂಗಳೂರು.


BRUSH OFF
YOUR
PROBLEMS
WITH

RAKA
PAINT
BRUSHES




R. K. BRUSH INDUSTRIES

87/174 ACHARYA NAGAR,
KANPUR-208 003.

Phone: 45814
Grams: SIKRODIACO KANPUR

Veda Prakash R. No. 27437/75 Regd. No. KRNR 13/75-76


## ಸಂಚಿತ — ವಿಕಸಿತ

ಇದು
ನಿಮ್ಮ ಉಳಿತಾಯದ ಗಿಡ.
"ಕ್ಯುಮುಲೇಟಿವ್ ಡಿಪಾಸಿಟ್ ಯೋಜನೆ"
ಇದನ್ನು ನೀರೆರೆದು ಪೋಷಿಸಿ.
ನಾಳೆ ನಿಮ್ಮ ಬಾಳಿಗೆ ನೆರಳು ನೀಡುವ
ಮರವಾಗಿ ಬೆಳೆಯುತ್ತದೆ.

ಇದೊಂದು ಬಹುದ್ದೇಶ ಯೋಜನೆ.
12 ತಿಂಗಳಿನಿಂದ 120 ತಿಂಗಳ ವರೆಗೆ
ಪ್ರತಿ ತಿಂಗಳು ರೂ. 5, 10 ಅಥವಾ
ಅದರ ಗುಣಕಗಳಲ್ಲಿ ಕೊಡುತ್ತಾ ಬನ್ನಿ.
ಅವಧಿ ಮುಗಿದಾಗ ಒಂದು ದೊಡ್ಡ ಮೊತ್ತ
ನಿಮಗೆ ಸಿಗುತ್ತದೆ.

ಮುಂದೆ ಮಹತ್ವದ ಸಂದರ್ಭ ಒಂದರಲ್ಲಿ
ಒಂದು ದೊಡ್ಡ ಮೊತ್ತದ ಹಣ ಬೇಕಾದಾಗ
ಇಂದಿನ ನಿಮ್ಮ ಉಳಿತಾಯ ನೆರವಾಗಿ ಬರುತ್ತದೆ.

# ಸಿಂಡಿಕೇಟ್ ಬ್ಯಾಂಕ್

ಸಣ್ಣ ಉಳಿತಾಯ ಯೋಜನೆಗಳ ಶಿಲ್ಪಿ